ಅರವಿಂದ ಗ್ರಂಥಮಾಲೆಯ ೧ನೆಯ ಕಮಲ

# ನಂದನವನ

(ರೂಪಕ ಚಿತ್ರಕ ಕಥೆಗಳು)

ಮುನ್ನುಡಿಕಾರರು

**ಪ್ರೊ—ವಿ. ಕೃ. ಗೋಕಾಕ,** ಎಂ. ಎ.

ಕತೆಗಾರ

**ಕಾಪಸೆ ರೇವಪ್ಪ**

ಮಾರ್ಚ] ೧೯೩೭ [**ಬೆಲೆ ೧೦ ಆಣೆ**

# ಅ ರ್ಪ ಣ

ನಂದನವನದ ಯಾವ ಎರಡು ಹಕ್ಕಿಗಳ ಹೃದಯ ಕಾಸಾರದ ಅಮೃತ ಪಾನಕ್ಕಾಗಿ ನನ್ನ ಅಂತರಾತ್ಮದ ಹಂಸವು ಹಗಲಿರುಳು ಹಂಬಲಿಸುವದೋ ಆ ಕಿನ್ನರ ದಂಪತಿಗಳ ಕರ ಕಮಲದಲ್ಲಿ ನನ್ನ ಈ ಪುಟ್ಟ ಕೃತಿಯನ್ನು ಅಕ್ಕರತೆಯಿಂದ ಅರ್ಪಿಸುವೆ. ಓಂ ದೇವತಾ ದಂಪತಿಃ.

—ಕತೆಗಾರ.

# ವಿಷಯ ಸೂಚಿ

---



---

# ಒಪ್ಪೋಲೆ

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ಅರ್ಪಣ ii | 10 | ಕೊಳ್ಳುವರೆಂದು | ಕೊಳ್ಳುವದೆಂದು |
| ಮು 2 | 8 | ಗೀತಿಯೊಂದು | ಗೀತಿಯೆಂದು |
| 2 | 12 | ನಂದನವ | ನಂದನವನ |
| ಟಿಪ್ಪಣಿ 1 | 4 | ಕುಟಿಗಳು | ಕುಟಿಗಳಲಿ |
| 2 | 16 | ದುಕುಲ | ದುಗುಲ |
| 3 | 7 | ಚಾಣಕಾಣಲು | ತಾಣಕಾಣಲು |
| 4 | 12 | ಪಾಕ | ಕೂಪ |
| 6 | 12 | ದೇವನಾನು | ದೇವನಸು |
| 6 | 22 | ತೊಳಗಳಲಿ | ಕೊಳಗಳಲಿ |
| 12 | 5 | ಅವಳಲಿ ಲಿಂಬೆಮ್ಮನ | ಲಿಂಬೆಮ್ಮನ |
| 32 | 22 | ತಾಯಿ! ತಾಯಿ!! | ಕಾಯಿ! ಕಾಯಿ!! |
| 35 | 2 | ಹೇಗೆ | ಏಕೆ |
| 48 | 12 | ತೊಳಲಾಡಿಸಿದೆ | ತೊಳಲಾಡಿದೆ |
| 48 | 22 | ಮಾನವಂತಕ | ಮಾನವಂತರ |
| 53 | 26 | ನೋಟವನ್ನು | ನೋವನ್ನು |
| 56 | 16 | ಗೋಣಿ | ಗೋಣು |
| 57 | 1 | ಲಯಹರಿಲ್ಲ | ಲಹರಿಯಲ್ಲಿ |
| 60 | 11 | ನಂಬಿಸಿದು | ರಂಬಿಸಿದ್ದು |
| 65 | 24 | ದೃಷ್ಟಿ | ಸೃಷ್ಟಿ |
| 75 | 8 | ನೀರು | ನೀರು ಎಲ್ಲಿ |
| 77 | 8 | ಹೊರಗಿನಿಂದ | ರಾಯರು ಹೊರಗಿನಿಂದ |
| 78 | 23 | ಬೆಂಕಿ | ಬೆರಕಿ |
| 29 | 13 | ಅವಳ | ಅವರ |
| 85 | 16 | ಒಂದೊಂದಿಗೆ | ಒಂದೊಂದು ಹೆಜ್ಜೆಗೆ |
| 85 | 16 | ಘೇನಿಪನು | ಧೇನಿಪನು |
| 87 | 3 | ಹೊಟ್ಟೆ | ಗುಹೆ |
| 98 | 19 | ತೊಳವಾಟ | ತೊಳಲಾಟ |
| 99 | 6 | ಚುಬತಾಗ್ರದ | ಚುಬಕಾಗ್ರದ |
| 102 | 15 | ನಲ್ಲ | ನಲ್ಲನ |
| 107 | 23 | ಲಿಂಗ | ಅಂಗ |

# ನಮ್ಮ ಮಾತು



ಎಲ್ಲಕ್ಕೂ ಮೊದಲಿಗೆ ನಮ್ಮ ಗ್ರಂಥಮಾಲೆಯ ಉದ್ದೇಶವನ್ನು ವ್ಯಕ್ತಪಡಿಸಿ, ಬಳಿಕ ಪ್ರಸ್ತುತ ಪುಸ್ತಕದ ಬಗೆಗೆ ಎರಡು ಮಾತುಗಳನ್ನು ಹೇಳುವುದು ಸಮಂಜಸವಷ್ಟೆ? ಕನ್ನಡ ನಾಡಿನಲ್ಲಿ ವಿಚಾರ ಪ್ರಚುರ ವಾಙ್ಮಯವನ್ನು ರಂಜಕ ಹಾಗೂ ತಾತ್ವಿಕ ಹೀಗೆ ಎರಡು ವಿಧದ ಪುಸ್ತಕಗಳ ರೂಪದಿಂದ ಪ್ರಚಾರಗೊಳಿಸುವುದೇ ನಮ್ಮ ಮನೋರಥವಾಗಿದೆ. 'ಅರವಿಂದ' ವೆಂದರೆ ಕಮಲ. ಕಾವ್ಯ ಹಾಗೂ

ಯೋಗ ಇವೆರಡರಲ್ಲಿಯೂ ಕನ್ನಡದ ಸ್ಥಾನವು ಅತ್ಯುಚ್ಚ ವಾಗಿಯೇ ಇದೆ ಸಾಹಿತ್ಯದೊಳಗೆ ಪದನಾರವಿಂದ, ಯೋಗ ದೊಳಗೆ ಹೃತ್ಕಮಲ ಇವೆರಡೂ ಬಹು ಮುಖ್ಯ ವಸ್ತುಗಳು. ಒಟ್ಟಿಗೆ ಯೋಗ ಭೋಗಗಳೆರಡೂ ನಮ್ಮ ಮಾಲೆಯ ದೃಷ್ಟಿ ಪಥದಲ್ಲಿ ಕಂಗೊಳಿಸುವ ಭವ್ಯ ವಸ್ತುಗಳು. "ಭೋಗ ವಿಚಾರವು ಬೇಕು ನೃಪತಿಗಾತ್ಮ ಯೋಗ ವಿಚಾರವೂ ಬೇಕು" ಎಂದು ಸಿದ್ಧ ರತ್ನಾಕರ ವರ್ಣಿಯ ಮಹಾ ಮಂತ್ರವನ್ನೇ ನಾವಿಲ್ಲಿ ಉದ್ಘೋಷಿಸುವೆವು. ಕನ್ನಡ ನಾಡು ನಮ್ಮ ಈ ಭವ್ಯ ಆಕಾಂಕ್ಷೆಗೆ ಬೆಂಬಲವನ್ನಿತ್ತು ನಮ್ಮಿಂದ ಸೇವೆ ಮಾಡಿಸಿ ಕೊಳ್ಳುವರೆಂದು ಹಾರೈಸುತ್ತೇವೆ.

ಇನ್ನು ಪ್ರಸ್ತುತ ಪುಸ್ತಕವಾದ "ನಂದನವನ"ದ ವಿಷಯ. ಗೆಳೆಯ ಕಾಪಸೆ ರೇವಪ್ಪನವರ ಚಿತ್ರಕಲಾಪ್ರವೃತ್ತಿಯು ನಮ್ಮ ನಾಡಿಗಿದೊಂದು ಹೊಸಬಗೆಯ ಚಿತ್ರಕ ಕಥಾ ಸಾಹಿತ್ಯವನ್ನು ಒದಗಿಸಿದೆ. ಅವರ ಅಂತರಂಗದ ಅಶೀಮ ಆಶೆಯು ಇವುಗಳ ತಿರುಳು. ಹಾಗೂ ಅವರ ದಿನಗೆಲಸದ ಕುಂಚದ ಮೃದು ರೇಖೆಗಳ ರೂಪಾಂತರದಂತಿರುವ ಲಾಲಿತ್ಯವು ಇವುಗಳ ಮೆರುಗು. ಅರ್ಥಕ್ಕಿಂತ ಹೆಚ್ಚು ಕತೆಗಳು ಈ ಜಾತಿಯವು. ನಮ್ಮ ಮಾಲೆಯ ಉದ್ದೇಶವನ್ನು ಅನುಸರಿಸಿ ಇವು ವಾಚಕರ ತಲೆಯಲ್ಲಿ ವಿಚಾರ ಚಕ್ರಕ್ಕೆ ನಯವಾದ ಚಾಲನೆಯನ್ನು ಕೊಡುವಂತಹವಾಗಿವೆಯೆಂದು ನಮ್ಮ ದೃಢವಾದ ಅಭಿಪ್ರಾಯವಿದೆ.

ನಮ್ಮ ಗೆಳೆಯರೆಲ್ಲರೂ ಒಂದೊಂದು ವಿಚಾರದಲ್ಲಿ ಒಬ್ಬೊಬ್ಬ ಮಹಾಪುರುಷರ ಗ್ರಂಥಗಳ ಸತತ ಅನುಶೀಲನದ

ಫಲದಿಂದ ನಿಶ್ಚಿತಕ್ಕೆ ಬಂದು ಮುಟ್ಟಿರುವುದರಲ್ಲಿ, ಶ್ರೀರಾಮ ಕೃಷ್ಣಪರಮಹಂಸರು ನಮ್ಮೆಲ್ಲರಿಗೆ ನಮ್ಮ ಬೆಳವಣಿಗೆಯ ಶಿಶು ಅವಸ್ಥೆಯಲ್ಲಿ (ಗ್ರಂಥರೂಪದಿಂದ) ಮೊಲೆಯುಣಿಸಿ ಕಾಪಾಡಿದ ಆದಿ ಮಾತೆಯಂತಿರುವದರಿಂದ, ಅವರ ಶತವಾರ್ಷಿಕ ಜನ್ಮೋತ್ಸವವನ್ನು ನೆರವೇರಿಸಿ, ಆ ಶುಭ ಮುಹೂರ್ತದಲ್ಲಿಯೇ ನಮ್ಮ ಗ್ರಂಥಮಾಲೆಯ ಜನ್ಮವೂ ಆಗಬೇಕೆಂದು ನಾವಿಚ್ಛಿಸಿದ ಮೇರೆಗೆ, ಬಹು ಸ್ವಲ್ಪ ಅವಧಿಯಲ್ಲಿ ಈ ಮೊದಲನೆಯ ಪುಸ್ತಕವನ್ನು ಕಲ್ಪನಾತೀತವಾದ ಪರಿಶ್ರಮದಿಂದ ಹೊತ್ತಿಗೆ ಮುದ್ರಿಸಿ ಒಂದು ವಾರದಲ್ಲಿ ಒದಗಿಸಿ ಕೊಡುವುದರಲ್ಲಿ ಕೌಶಲ್ಯವನ್ನು ತೋರಿದ—ಬೆಂಗಳೂರಿನ ಇಂಡಿಯನ್ ಪ್ರೆಸ್ಸಿನ ಒಡೆಯರಾದ ಶ್ರೀಮಾನ್ ವಿ. ಎಸ್. ನಾರಾಯಣರಾಯರಿಗೆ ನಾವು ಬಣ್ಣಿಸಲಾಗದಷ್ಟು ಕೃತಜ್ಞರಾಗಿದ್ದೇವೆ. ಇದೇ ಕಾರ್ಯದಲ್ಲಿ ನಮ್ಮವರಾಗಿ ಆಸ್ಥೆಯಿಂದ ನಮಗೆ ನೆರವಾದ ಶ್ರೀಮಾನ್ ತಿರುಮಲೆ ತಾತಾಚಾರ್ಯ ಶರ್ಮರು (ಸಂ|| ವಿಶ್ವಕರ್ಣಾಟಕ) ಅವರಿಗೆ ನಾವು ಚಿರ ಋಣಿಗಳಾಗಿದ್ದೇವೆ.

ಇದೇ ಮೇರೆಗೆ ಕನ್ನಡನಾಡಿನ ಅಣ್ಣಂದಿರೆಲ್ಲ ನಮಗೆ ವಿಧ ವಿಧದಿಂದ ನೆರವಾದರೆ ಮಾತ್ರ ನಮ್ಮ ಹೃದ್ಗತವು ಈಡೇರುವದೆಂದು ಬಿನ್ನವಿಸುವೆವು.

ಈಗಾಗಲೇ ನಮ್ಮ ಗ್ರಂಥಮಾಲೆಗೆ ಸ್ವಹಸ್ತ ಪರಹಸ್ತಗಳಿಂದ ಧನ ಸಹಾಯವನ್ನು ಮಾಡಲಾರಂಭಿಸಿರುವ ನಮ್ಮ ಹಿತೈಷಿಗಳಿಗೆಲ್ಲ ನಾವು ತುಂಬಾ ಕೃತಜ್ಞರಿದ್ದೇವೆ.

ಸಂಪಾದಕ.

# ಮುನ್ನುಡಿ

ಇಂದಿನ ಇತಿಹಾಸವನ್ನು ಬರೆದಾಗ ಕೆಲವೊಂದು ಪಟ್ಟಣಗಳಿಗೆ ಬರಲಿರುವ ಪ್ರಾಶಸ್ತ್ಯವನ್ನು ನಾವು ಕಣ್ಣಾರೆ ಕಾಣಬಹುದು. ಬೆಂಗಳೂರು, ಮೈಸೂರು, ಧಾರವಾಡ, ಮಂಗಳೂರು ನಗರಗಳಲ್ಲಿ ಕನ್ನಡದ ಚಳವಳಿಯು ಮೊದಲು ತಲೆಯೆತ್ತಿತು. ವಿಜಾಪುರ, ಬೆಳಗಾಂವಿ, ಹೈದ್ರಾಬಾದ, ಬಳ್ಳಾರಿ ಮೊದಲಾದ ಪಟ್ಟಣಗಳಲ್ಲಿ ಅದು ಸ್ವಸ್ವರೂಪವನ್ನು ಕಂಡುಕೊಂಡಿತು. ಶಿವಮೊಗ್ಗೆ, ಗುಲಬರ್ಗೆ, ಮಡಿಕೇರಿ, ಉಡುಪಿ, ಗದಗು ಮೊದಲಾದ ಸ್ಥಳಗಳಲ್ಲಿಯೂ ಅದು ಕಾರ್ಯೋನ್ಮುಖವಾಯಿತು. ಅಂತೂ ಇಂದಿನ ಕನ್ನಡತಿಯು ನಗರವಾಸಿನಿಯಾದ ಸುವಾಸಿನಿಯೆಂದು ಹೇಳಿದರೆ ಬಹು ಜನರು ಸಹಜವಾಗಿ ಒಪ್ಪಿಕೊಳ್ಳಬಹುದು.

ಆದರೆ ಹಳ್ಳಿಗಳಲ್ಲಿಯೂ ಅವಳು ಸುಳಿಯದೆ ಹೋಗಿಲ್ಲ. ಕೆಲವೆಡೆಗೆ ತನ್ನ ಮನೆಯನ್ನೂ ಕಟ್ಟಿಕೊಂಡಿದ್ದಾಳೆ. ವಿಜಾಪುರ ಜಿಲ್ಲೆಯಲ್ಲಿ ಹಲಸಂಗಿಯ ಹೆಬ್ಬಾಗಿಲು ಅವಳಿಗಾಗಿ ಸರ್ವದಾ ತೆರೆದಿಟ್ಟಿದೆ. ಇಲ್ಲಿಂದಲೇ ಕನ್ನಡನಾಡಿಗೆ ಜಾನಪದ ಗೀತದ ಜೋಗುಳವು ಇಂಪಾಗಿ ಕೇಳಿ ಬಂದಿತು. ಕಾವ್ಯದ ಹೊಸ ಸೆಲೆಯೊಂದು ಇಲ್ಲಿಂದ ಚಿಮ್ಮಿತು. ಹೊಸ ಜೀವನದ ಆಕಾಂಕ್ಷೆಯೊಂದು ಇಲ್ಲಿ ಸುಳಿಯಿತು. ಗೆ। ಮಧುರಚೆನ್ನರ ಹಾಗೂ ಅವರ ಗೆಳೆಯರ ಕೃತಿಗಳಿಂದ ಹಲಸಂಗಿಯು ಈಗಾಗಲೇ ಪ್ರಸಿದ್ಧವಾಗಿದೆ. ಇಲ್ಲಿ ಕೊನರಿದ್ದ ಜೀವನದ ನಾವೀನ್ಯವು ಸಾಹಿತ್ಯವಾಗಿ ಪರಿಪಾಕ ಹೊಂದಿದೆ. ಈ ಹಳ್ಳಿಯಲ್ಲಿ ಚಿಗಿತ ಕುಡಿವಳ್ಳಿಯ ನರುಗಂಪು ಉಳಿದ ಕಂಪಿನೊಡನೆ ಗಮಗಮಿಸಿಯೂ ತನ್ನ ಸೊಂಪನ್ನು ಕಾಯ್ದುಕೊಂಡಿದೆ. 'ನಂದನವನ' ದಿಂದಲೇ ಮೊದಲಾಗಿರುವ 'ಅರವಿಂದ' ಗ್ರಂಥಮಾಲೆಯು ಹಲಸಂಗಿಯಲ್ಲಿಯ ಗೆಳೆಯರ ಸಮಷ್ಟಿ ಜೀವನದ ಸಾಹಸವಾಗಿದೆ. ಗೆ। ಮಧುರಚೆನ್ನ ಹಾಗೂ ಅವರ ಗೆಳೆಯರ ಪ್ರತಿಭೆ,ಕಾರ್ಯೋನ್ಮುಖತೆಗಳ ಫಲವಾಗಿದೆ

'ನಂದನವನ'ದ ಕರ್ತೃಗಳಾದ ಗೆ। ಕಾಪಸೆ ರೇವಪ್ಪನವರು ಈ ಸಾಹಸವನ್ನು ಕೈಕೊಂಡ ಗೆಳೆಯರಲ್ಲೊಬ್ಬರಾಗಿದ್ದಾರೆ. ಒಂದು ರೀತಿಯಲ್ಲಿ ಕನ್ನಡನಾಡಿನ ಓದುಗರಿಗೆಲ್ಲ ಅವರು ಪರಿಚಿತರೆಂದೇ ಹೇಳಬಹುದು. ಇವರ ಚಿತ್ರಶಿಲ್ಪದ ಮಾದರಿಗಳು ಹಲವು "ಜಯ ಕರ್ನಾಟ"ಕದಲ್ಲಿ ಕೆಲವು ವರುಷಗಳ ಹಿಂದೆ ಪ್ರಸಿದ್ಧವಾಗಿ ಜನರ ಮೆಚ್ಚುಗೆಯನ್ನು ಪಡೆದವು. "ಏನಿರಲಿಲ್ಲ?" ಎಂಬ ಇವರ ಕವಿತೆ ಯೊಂದು "ಹಕ್ಕಿ ಹಾರುತಿದೆ" ಎಂಬ ಗೆಳೆಯರ ಕವನ ಸಂಗ್ರಹ ದಲ್ಲಿ ಪ್ರಕಟವಾಗಿ ಅತ್ಯುತ್ತಮ ಚಿತ್ರಗೀತೆಯೊಂದು ಅನೇಕ ವಿಮರ್ಶಕ ರಿಂದ ಮನ್ನಣೆಪಡೆಯಿತು. ಇವರ ಕಾವ್ಯದಲ್ಲಿ ಚಿತ್ರವಿದೆ; ಚಿತ್ರದಲ್ಲಿ ಕಾವ್ಯವಿದೆ. ಗದ್ಯಲ್ಲಿಯೇ ಆಗಲಿ, ಪದ್ಯದಲ್ಲಿಯೇ ಆಗಲಿ ಇವರು ಬರೆದುದೆಲ್ಲ ಚಿತ್ರಕಾವ್ಯ.

"ನಂದನವ" ವೆಂಬ ಈ ಸಂಗ್ರಹದಲ್ಲಿ ಅವರ ಏಳು ಕೃತಿ ಗಳು ಕೂಡಿನಿಂತಿವೆ. ಇವು ಕಥೆಗಳೆಂದು ಹೇಳಿದರೆ ಹೆಸರು ಗೊತ್ತಾ ಗದ ಒಬ್ಬರನ್ನು ಇನ್ನಾವುದೋ ಹೆಸರಿನಿಂದ ಕರೆದಂತಾದೀತು. 'ಕಳೆದ ಮುತ್ತು' 'ಪಾವನೆ' 'ಯಾರತಪ್ಪಿನ ಫಲ?' ವೆಂಬವು ಕಥೆಗ ಳೆಂದು ಹೇಳಬಹುದಾದರೂ ಅಲ್ಲಿಯ ಶಬ್ದವಿಲಾಸವನ್ನು ಕಂಡವರು ತಮ್ಮ ಮಾತನ್ನು ಹಿಂತೆಗೆಯುವರು. ಇವು ಭಾವನಾ ಚಿತ್ರಗಳಷ್ಟೇ ಅಲ್ಲ. 'ಬಣ್ಣ ಬಣ್ಣದ ಬಾಳಿ'ಗೆ ಈ ಹೆಸರು ಅನ್ವಯಿಸಬಹುದು. ಇವು ರೂಪಕಗಳು. ರೂಪಕಗಳೆಂದೇ ಇವುಗಳ ವಿಚಾರಣೆಯಾಗಬೇಕು.

ಕಥಾಂಶವು ಈ ಎಲ್ಲ ಕೃತಿಗಳಲ್ಲಿ ವಸ್ತುವಾಗಿ ಇದ್ದೇ ಇದೆ. ರಸನಿಮಿಷಗಳನ್ನೂ, ಭಾವನಾಲಹರಿಗಳನ್ನೂ ಅರಳಿಸುವ ಕೈವಾಡವು ಅದರ ಜೊತೆಗೆ ಪ್ರತಿಯೊಂದು ಕೃತಿಯಲ್ಲಿದೆ. ಆದರೆ ಅವೆರಡರಂತೆ ಇವುಗಳಲ್ಲಿ ರೂಪಕದ ಮೋಡಿಯಿದೆ. 'ಬಿಲ್ವದಳ' 'ಹಕ್ಕಿಯ ಹಾಡು' ಮತ್ತು 'ಭವ್ಯಸ್ವಪ್ನ' ವೆಂಬ ಮೂರು ಕತೆಗಳು ಅಚ್ಚಳಿಯದ ರೂಪಕ ಗಳಾಗಿವೆ. ರೂಪಕಗಳನ್ನು ಶೇಖರಿಸುವುದರಲ್ಲಿ ಗೆ। ರೇವಪ್ಪನವರು ಬಲ್ಲಿದರೆಂಬ ಮಾತು ಇವನ್ನೋದಿದಾಗ ಮನದಟ್ಟಾಗುವದು.

ರೂಪಕಗಳಿಗೆ ಸಧ್ಯದ ಸಮಾಜ ಸ್ಥಿತಿಯು ಅಷ್ಟೊಂದು ರಮ್ಯ ವಸ್ತುವಾಗಲಾರದು. ಅದನ್ನು ವಸ್ತುವಾಗಿಟ್ಟುಕೊಂಡು ಈ ರೀತಿ ನುರಿಸಬೇಕಾದರೆ Tess, Anna Karenina, Victory ಮೊದಲಾದ ಮಹಾಕೃತಿಗಳಲ್ಲಿಯ ಸಾಮರ್ಥ್ಯಬೇಕು. ಇಲ್ಲದಿದ್ದರೆ 'ಪಂಚತಂತ್ರ', 'ಹಿತೋಪದೇಶ' ಇಲ್ಲವೆ ಈಸೋಪನ ದಂತಕಥೆಗಳಲ್ಲಿಯಂತೆ ಇಂಥ ವಸ್ತುವನ್ನು 'ಹಸಿ'ಯಾಗಿ ಉದುರಿಸಬೇಕು. 'ಕಳೆದ ಮುತ್ತು' 'ಪಾವನೆ' ಹಾಗು 'ಯಾರತಪ್ಪಿನ ಫಲ?' ಎಂಬಲ್ಲಿ ಸಣ್ಣ ಕಥೆಗಳ ವಸ್ತುವಿನ ಮೇಲೆ ರೂಪಕದ ಸ್ವಚ್ಛಂದ ಶೈಲಿಯನ್ನು ಆರೋಪಿಸಿದ್ದಾರೆ ಗ! ರೇವಪ್ಪನವರು. ಹೀಗಾಗಿ ಇವು ಸಣ್ಣಕಥೆಗಳೆಂದು ಓದುವವರನ್ನು ವರ್ಣನ ಪರಶೈಲಿಯು ತೇಲಿಸಿಬಿಡುತ್ತದೆ. ಇವು ರೂಪಕಗಳೆಂದು ತಿಳಿದವರನ್ನು ಕೃತಿಗಳ ಜಡವಸ್ತುವು ಕಾಲು ಜಗ್ಗಿ ತಡೆದು ನಿಲ್ಲಿಸುತ್ತದೆ. 'ಕಳೆದ ಮುತ್ತು' ಒಂದು morality play (ಸ್ಥೂಲ ರೀತಿಯ ನಾಟಕ) ದಂತೆ ತೀರ ಸಾಮಾನ್ಯವೆನಿಸಿದರೆ 'ಪಾವನೆ' ಹಾಗೂ 'ಯಾರ ತಪ್ಪಿನ ಫಲ?' ಎಂಬ ಕೃತಿಗಳಲ್ಲಿ ಕಲೆಗಿಂತ ಪ್ರಚಾರವು ಹೆಚ್ಚಾದುದು ಕಂಡುಬರುವುದು ಆನಂದರ 'ಜೀವನ' ಹಾಗು ರೇವಪ್ಪನವರ 'ಪಾವನೆ' ಕೃತಿಗಳನ್ನು ಹೋಲಿಸಿ ನೋಡಿದರೆ ಈ ಮಾತು ಮನದಟ್ಟಾಗುವುದು.

ಕತೆಗಾರಿಕೆಯು ರೇವಪ್ಪನವರು ಇನ್ನೂ ಸಾಧಿಸಬೇಕಾದ ಕಲೆ. ಆ ಹಾದಿಯಲ್ಲಿ ಮೇಲೆ ಹೇಳಿದ ಕೃತಿಗಳು ಅವರ ಹವಣಿಕೆಗಳೆಂದು ತಿಳಿಯುವುದು ಉಚಿತವಾಗಿದೆ. ಹವಣಿಕೆಗೆ ಪವಣಿಕೆ (manipulation) ಯೊಂದು ಕೂಡಿದಾಗ ಅಲ್ಲಿಯ ಕಲೆಗೆ ಪರಿಪೂರ್ಣತೆ ಬರುವುದು. ಆದರೆ ಅವರ ಭಾವನಾಚಿತ್ರದಲ್ಲಿ, ರೂಪಕಗಳಲ್ಲಿ ಇಂಥ ಪೂರ್ಣತೆಯನ್ನು ನಾವು ಈಗಾಗಲೇ ಕಾಣಬಹುದು. ಬಣ್ಣ ಬಣ್ಣದ ಬಾಳಿನಲ್ಲಿ ಅವರ ಕತೆಯು ಹೂತು ಹಣ್ಣಿದೆ. ಇಲ್ಲಿಯ ಬಾಲ್ಯದ ಸವಿಗನಸು ಸುಖಮಯವಾದ ಹೊಸ ಜಗತ್ತಿನ ಸೊತ್ತಾಗಿ ಕಣ್ಣು ಕಟ್ಟುವದು. ರೂಪಕದಲ್ಲಿ ಐಹಿಕ ವೈಷಮ್ಯದ ಭಾವವೂ ಸೂಚ್ಯವಾಗಿ

ಸೇರಿದ್ದರಿಂದ ಇದು ಭಾವನಾ ಚಿತ್ರವಾಗಿದೆ. ' ಹಕ್ಕಿಯ ಹಾಡು ' ಸಹ ಇದೇ ಮಾದರಿಯದಾಗಿದೆ ಯನ್ನಬೇಕು.

' ಬಿಲ್ವದಳ ' ಹಾಗೂ ' ಭವ್ಯಸ್ವಪ್ನ ' ದಲ್ಲಿ ರೇವಪ್ಪನವರದೇ ಆದ ಕಾವ್ಯ ಗುಣವೊಂದು ನಿಚ್ಚಳವಾಗಿ ಒಡಮೂಡಿದೆ. " ಬಣ್ಣ ಬಣ್ಣದಬಾಳಿ ' ನಲ್ಲಿ ಶೈಶವದ ಅಂದ ಚಂದಗಳನ್ನೇ ಅವರು ದಿವ್ಯ ವಾಗಿ ತೋರಿಸಿದರೆ ಇಲ್ಲಿ ಒಂದು ಅಸಾಮಾನ್ಯ ಅನುಭವವನ್ನು ಅವರು ತಮ್ಮ ವಸ್ತುವಾಗಿ ಇಟ್ಟುಕೊಂಡಿದ್ದಾರೆ. ಈ ಕೃತಿಗಳೆರಡು ಅವರ ಜೀವನ ದೃಷ್ಟಿಯನ್ನು ಓದುಗರಿಗೆ ಸ್ಪಷ್ಟವಾಗಿಸುವ ಸಾಧನಗಳಾಗಿವೆ. ' ಬಿಲ್ವದಳ ' ವು ರೇವಪ್ಪನವರ ' ಮಧುರ ಗೀತ '. ' ಭವ್ಯ ಸ್ವಪ್ನ ' ವು ಅವರ ' ನನ್ನನಲ್ಲ '. ಮಧುರ-ಚೆನ್ನರ ಅಡಿಯಲ್ಲಿ ಅಡಿಯಿಟ್ಟಿಲ್ಲ, ಅವರ ಸಂಗಡಿಗಳಾಗಿ ರೇವಪ್ಪನವರು ತಮ್ಮ ದಾರಿಯಿನ್ನು ತುಳಿದಿದ್ದಾರೆ. ಇವರ ' ಬಿಲ್ವದಳ ' ವು ನನ್ನ ' ಮಹಾಪ್ರೀತಿ '; ಇವರ ' ಭವ್ಯ ಸ್ವಪ್ನ ' ವು ನನ್ನ ' ಕಲೋಪಾಸಕ '. ಇಲ್ಲಿ ಉದಾಹರಿಸಿದ ಯಾವ ಕೃತಿಗಳ ಯೋಗ್ಯತೆಯನ್ನು ನಾನು ವರ್ಣಿಸುತ್ತಿಲ್ಲ. ಅವುಗಳ ಜಾತಿ ರೀತಿಯನ್ನು ಮಾತ್ರ ಸೂಚಿಸ ಬಯಸುತ್ತೇನೆ. ಶ್ರೀ ಬೇಂದ್ರೆಯವರ 'ಕಾಮ ಕಸ್ತೂರಿ' ಮತ್ತು ಉಳಿದ ನಲ್ಗವಿತೆಗಳು, ಶ್ರೀ ಕಡಂಗೋಡ್ಲು ಅವರ 'ನಲ್ಮೆ', ಶ್ರೀ ಶ್ರೀನಿವಾಸರ 'ಶಾಂತಾ', ಶ್ರೀ ಮಧುರಚೆನ್ನರ ' ಮಧುರ ಗೀತೆ ', ರೇವಪ್ಪನವರ ' ಬಿಲ್ವದಳ ' ಹಾಗೂ ನನ್ನ ' ಮಹಾಪ್ರೀತಿ ' ಇವೆಲ್ಲ ಒಂದೇ ವಸ್ತುವನ್ನು ವೈಯಕ್ತಿಕವಾಗಿ ಬಿಂಬಿಸುವ ನಿಡುಗಬ್ಬಗಳಾಗಿವೆ. ಇದೇ ರೀತಿಯಲ್ಲಿ ' ಸುಬ್ಬಣ್ಣ ', ' ಮೂರ್ತಿ ' ' ನನ್ನ ನಲ್ಲ ' ' ಭವ್ಯ ಸ್ವಪ್ನ ' ಹಾಗೂ ' ಕಲೋಪಾಸಕ ' ಎಂಬ ಕೃತಿಗಳು ಒಂದೇ ಜಾತಿಯವು. ಬಾಣಕಾದಂಬರಿಯ ಹೋಲಿಕೆಯನ್ನು ಮಾತ್ರ ' ಬಿಲ್ವದಳ ' ದಲ್ಲಿ ಕಾಣುವವರು ಅದನ್ನು ಇನ್ನೂ ಆಳವಾಗಿ ಪರೀಕ್ಷಿಸಬೇಕು.

ಇಲ್ಲಿ ಉದಾಹರಿಸಿದ ನನ್ನ ಎರಡು ಕೃತಿಗಳಲ್ಲಿಯ ಕಲೆಯ ನೆಲೆಯ ಬಗ್ಗೆ ನಾನು ಏನೂ ಹೇಳ ಬಯಸುವದಿಲ್ಲ. ಉಳಿದವರ

ಕೃತಿಗಳೆಲ್ಲ ನನ್ನ ದೃಷ್ಟಿಯಲ್ಲಿ ಪರಿ ಪೂರ್ಣವಾಗಿವೆ. ರೇವಪ್ಪನವರ 'ಬಿಲ್ವದಳ' ಮತ್ತು 'ಬಣ್ಣ ಬಣ್ಣದಬಾಳಿ' ನಲ್ಲಿ ಕಲೆಗೆ ಬೇಕಾಗುವ ಬಿಗುವೂ ವಿಲಾಸವೂ ಸರಿಬೆರಿಕೆಯಾಗಿವೆ. ಅವರ 'ಭವ್ಯ ಸ್ವಪ್ನ' ಕ್ಕೆ ಮೂರ್ತಿ ಶಿಲ್ಪ, ವಾಸ್ತುಶಿಲ್ಪದ ಅವಶ್ಯಕತೆಯು ಇನ್ನೂ ಹೆಚ್ಚಾಗಿತ್ತು.

ಇವರ ಕಾವ್ಯದ ವೈಶಿಷ್ಟ್ಯವನ್ನು ಸ್ವಲ್ಪದರಲ್ಲಿ ವಿವರಿಸಬಹುದು. ಶೈಶವದ ಮುಗ್ಧತೆ, ಪ್ರಾಂಜಲಭಾವ ಜಗತ್ತಿನವೈಷಮ್ಯವನ್ನು ಕಂಡು ತಳಮಳಗೊಂಡ ಹೃದಯ, ಹೊಸಬಾಳಿನ ಬೆನ್ನು ಹತ್ತುವ ಸಾಹಸ, ಇದ್ದಬಾಳಿನ ಅಂದಚಂದವನ್ನು ಕಂಡುಕೊಳ್ಳುವ ಸಹನೆ, ಪ್ರೇಮದ ನವೀನ ದರ್ಶನ, ಶ್ರದ್ಧೆಗೆ ಅನುಗುಣವಾಗಿ ಲಭಿಸಿದ ಅನುಭೂತಿ, ಇವೆಲ್ಲ ಒಂದು ವಿಶೇಷ ರೀತಿಯಲ್ಲಿ ಜೋಡಣೆಗೊಂಡು ಅವರ ವ್ಯಕ್ತಿತ್ವದ ಕಲ್ಪನೆಯನ್ನು ಕೊಡುತ್ತವೆ. ಹಳ್ಳಿಯ ಬಯಲಿನಲ್ಲಿ ಬೆಳದ ಸ್ವಚ್ಛಂದ ಕಲ್ಪನಾಶಕ್ತಿ ಅದನ್ನು, ರೂಪಿಸುವ ಚಿತ್ರ ಶಿಲ್ಪದ ಬಗೆ, ಗದ್ಯಕಾವ್ಯದ ಶೈಲಿಯ ಹೊಸ ಮಾದರಿ ಇವೆಲ್ಲ ಅವರ ಕತೆಯ ಹೆಗ್ಗುರುತುಗಳು.

ತಮ್ಮ ವ್ಯಕ್ತಿತ್ವಕ್ಕೆ ಸರಿಹೋಗುವ ವಸ್ತುಗಳನ್ನು ಆಯ್ದುಕೊಂಡಲ್ಲಿ ರೇವಪ್ಪನವರ ಕೃತಿಗಳ ಕಾಂತಿಯು ಇನ್ನೂ ಹೆಚ್ಚುವುದರಲ್ಲಿ ಸಂಶಯವಿಲ್ಲ. ಅಸಾಮಾನ್ಯವಾದ ಅನುಭೂತಿಯ ಬೆಂಕಿಯಲ್ಲಿ ಜೀವದುಕ್ಕನ್ನು ಕಾಸಿ ಸಂಸಾರಕಾಸಾರದಲ್ಲಿ ಅದಕ್ಕೆ ನೀರುಣಿಸಿದರೆ ಅವರ ವ್ಯಕ್ತಿತ್ವದ ವೈಶಾಲ್ಯವು ಹೆಚ್ಚುವುದು. ಈ ವೈಶಾಲ್ಯದ ಲಕ್ಷಣಗಳು 'ಬಿಲ್ವದಳ' ಹಾಗೂ 'ಬಣ್ಣಬಣ್ಣದ ಬಾಳಿ'ನಲ್ಲಿ ಗೋಚರವಾಗಿವೆ. ಅದು ವೃದ್ಧಿಂಗತವಾಗಲೆಂದೇ ನನ್ನ ಹಾರೈಕೆ.

ಹಳ್ಳಿಗಾಡಿನ ವಿಲಕ್ಷಣ ವಾತಾವರಣದಲ್ಲಿ ಬೆಳದ ಸುಸಂಸ್ಕೃತ ಮನಸ್ಸಿನ ನಿರೀಕ್ಷಣಗಳೆಂದು ತಿಳಿದಾಗ ಕಥೆಗಳಂತಿದ್ದ ಮೂರು ಕೃತಿಗಳಿಗೂ ಕಳೆಬರುವದು. ಶೈಲಿಯಲ್ಲಿ ಕ್ವಚಿತ್ತಾಗಿ ಕಂಡು

ಬರುವ ವೈಷಮ್ಯಗಳು ಒಂದಿಲ್ಲೊಂದು ದಿನ ಲೋಪವಾಗ ತಕ್ಕುವು. ಕೆಲವೆಡೆಗೆ ಕಂಡುಬರುವ ಕಲೆಯ ಕೊರತೆಯು ತಾನಾಗಿ ಪೂರೈಸಿ ಕೊಳ್ಳುವುದು. ಮಿಡಿಯುವ ಜೀವಗಳೇ ಕಡಿಮೆ. ಹೊಸ ಜೀವ ವೊಂದು ಇಲ್ಲಿ ಮಿಡಿಯುತ್ತಿದೆ. ಕನ್ನಡ ನಾಡಿನ ಜನತೆಯು ಅದನ್ನು ಎತ್ತಿಹಿಡಿದು ನಲಿದಾಡಿಸಿ ನಲಿದಾಡಿಸಬೇಕು. ಒಳ್ಳೇ ಕಸುಮುವೊಂದನ್ನು ಪವಣಿಸಿಕೊಂಡ 'ಅರವಿಂದ ಗ್ರಂಥಮಾಲೆ'ಗೂ ಜನತೆಯಿಂದ ಪ್ರೋತ್ಸಾಹನ ಸಿಗಲೆಂದೇ ನನ್ನ ಹಾರೈಕೆ.

೨೦—೨—೧೯೩೬
"ಫರ್ಗ್ಯುಸನ್"
ಪುಣೆ.

ವಿ. ಕೃ. ಗೋಕಾಕ.



# ಬಿಲ್ವದಳ

ಆಹಾ! ಏನು ಕಡಲು! ಅಂತವಿಲ್ಲದ ಕಡಲು!! ಅಪಾರವಾಗಿಹ ಕಡಲು! ದಿಟ್ಟಿತಾಗದ ಕಡಲು!! ಆ ಕಡಲ ಒಡಲಲ್ಲಿ ಏನು ತೆರೆ! ಏನು ನೊರೆ!! ಏನು ಅಂದ! ಎನಿತು ಚಂದ! ಬಿಚ್ಚಿ ಮುಚ್ಚುವ ಅದರ ನಯವಾದ ತುಟಿಗಳು ಹೊನ್ನರವಿ ಎಸೆದಿರುವ ಚಿನ್ನದಲುಗಳೇನು! ಬಣ್ಣ ಬಣ್ಣಗಳುಗುವ ಅಚ್ಚು ಪಡಿಯಚ್ಚುಗಳ ಹೊಳಪಿನ ಏನು ಹಾನ!! ಇಂಥ ಕಡಲಡಿಯಲ್ಲಿ ಒಂದು ಮರವಿರುತಿಹುದು. ಬೇಸಿಗೆಯ ತಾಪದಲಿ ಬಾಯ್ಬಿಡುವ ವಾರಿಧಿಗೆ ತಂಪು ನೀಡಲು ಎಂದು ನೆರಗ ಬೀಸುತಲಿಹುದು. ಹೊನ್ನಹರೆ ತುಂಬಿರುವ ಯುವತಿಯೊರ್ವಳ ಹಾಗೆ ಅದರ ಸೊಬಗಿರುತಿಹುದು. ನೀಳವಹ ಕೈನೋಟ, ತುಂಬಿಬೆಳದಿಹ ಮಾಟ "ಬಾ! ಇಲ್ಲಿ ಬಾ!! ತೋಳ ತೊಡೆಗಳೊಳು ಕೂಡು ಬಾ! ಮಗುವಾಗಿ ಆಡು ಬಾ!!" ಎಂದಂಗು ನೋಡುಗರ ಹೃದಯಕ್ಕೆ ಕರೆಯುತ್ತಿಹುದು. ಲಲನೆಯರ ಕೋಮಲವಹ ಅಂಗ, ಹೊಳೆ ಹೊಳೆವ ಮೈಕಾಂತಿ, ಉಗು ಉಗುವ ಪ್ರಾಯ ಗಂಧ, ಯುವಕ ಜನ ಜಂಗುಳಿಯ ಮತ್ತುಗೊಳಿಸುವ ತೆರದಿ ಅದೆ ಚಿಗಿತ ಚಿಗುರೆಲೆಯ ಜೊಂಪು, ಹೂಗಳ ಕಂಪು "ಬಾ! ಮಗುವಾಗಿ ಬಾ!! ನನ್ನನಪ್ಪು ಬಾ!!! ನಲ್ಮೆಯ ತಾಯಾಗಿ ಮುದ್ದನುಣಿಸುವೆನು ಬಾ!!" ಎಂದೆಂದು ತಾಯಿತನ ಬೀರುತಿಹುದು. ವಾರಿಧಿಗೆ ಗಾಳಿಯನು ನೀಡುವಾಗ ಮೇಲಿಂದ ಸರಿಸಿ ತೋಗುವ ಫಲಾವಳಿಗಳು

“ತಾಯಿ ಮೊಲೆ ನಾವಾಗಿ ಹಾಲನುಣಿಸುವೆವು ಬಾ” ಎಂದು ಕರೆಯಿಯುತಿಹವು. ಇಂಥ ಮರದೊಳು ಎರಡು ಹಕ್ಕಿಗಳು ಕುಳಿತು, ತಮ್ಮ ತಮ್ಮೊಳಿ ಏನೋ ಆಡುತ್ತ ಹಾಡುತ್ತ, ನಕ್ಕು ನಲಿನಲಿಯುತ್ತ ಸಂತಸವ ಬೀರುತಿಹವು. ಅಹಾ! ಎಂಥ ಹಕ್ಕಿಗಳವು!! ಹೊನ್ನ ಬಣ್ಣದವಲ್ಲ; ರನ್ನ ಬಣ್ಣದವಲ್ಲ; ಹವಳ ಬಣ್ಣದವಲ್ಲ; ಹಾಲ ಬಣ್ಣದ ಹಕ್ಕಿ! ಪಕ್ಕಗಳು ಹಾಲಕೆನೆ! ಚುಂಚು ಚಿನ್ನದುದಾಗಿದೆ! ಇಂದ್ರನೀಲ ಕಣ್ಣು! ಸುತ್ತು ಹವಳದ ರೇಖೆ! ಆ ಎರಡು ಹಕ್ಕಿಯೊಳು ಒಂದು ಹೆಣ್ಣಾಗಿಹುದು. ಒಲುಮೆ ಅದರ ಜೀವನದ ತಿರುಳಿಹುದು. ಆ ಒಲುಮೆ ಅಲ್ಲಿ ಇಲ್ಲಿಯದಲ್ಲ, ಸುರರ ನಾಡಿನ ಒಲುಮೆ. ಚೆಲುವು ಒಲವುಗಳಿರಲು ಬೇರಿಹುದೆ ಸುರಲೋಕ? ಆದಕಂತೆ ಅವು ಸ್ವರ್ಗಲೋಕದ ಹಕ್ಕಿಗಳು! ಪುಟ್ಟೊಂದು ಸಂಸಾರವನು ಕಟ್ಟಿ ಮನೆ ಮಾಡಿ ಕೊಂಡಿಹವು.

ಒಂದು ದಿನ ಹೊಂಬಣ್ಣ ಕಿರಣಗಳು ಆಗತಾನೆ ಮುಗಿಲ ಮಂಟಪವ ನೇರುತಿಹವು. ರಾಗರಸವ ನೊಸರಿಸುವ ಅಚ್ಚ ತಿಳಿ ಮೋಡಗಳು ಬಾಲನೇಸರನೀಗ ಬರುವನೆಂದರಿತು ಹಾದಿ ಬಿಡಲೆಳಿಸಿ ಹೀಗೆ ಹೀಗೆ ಓಸರಿಸುತಿಹವು. ಬಣ್ಣ ಬಣ್ಣದ ದುತುಲನುಟ್ಟು ಆ ಉಷೆಯು ಎಸಿತು ಒಯ್ಯಾರದಲಿ ಪಡುವಲವ ಮೆಟ್ಟುತಿಹಳು! ಅವಳ ಸೆರಗಿನಂಚಿನಲಿ ನಯವಾಗಿ ನೆಯ್ದಿರುವ ಹೊನ್ನಗೆರೆಗಳ ಹೊಳಪು ರಸಿಕ ಹೃದಯದಲಿ ಭಾವನೆಯ ಕಡಲ ನುಕ್ಕಿಸುವವು. ರವಿರಾಯ ಬರುವನೆಂದರಿತು ಭೂಮಿ ತಾಯಿಯು ತಾನು ಹಸರು ಸೀರೆಯನುಟ್ಟು, ಮಾಂಗಲ್ಯಗಳ ತೊಟ್ಟು, ಸೌರಭ ಸೂಸುವ ಅರಳ-ಮಲ್ಲಿಗೆಯ ಉಡಿತಂದು ಹಿಡಿದಿಹಳು ಆತನಡಿಗಳಲ್ಲಿ.

ಇಂಥ ಸವಿ ಸಮಯದೊಳು ಒಂದು ಹಕ್ಕಿ ಬಂತು; ಮುಗಿಲ ಮಾರ್ಗದಿ ನೇರವಾಗಿಯೆ ಬಂತು. ಚಿಕ್ಕಿ ಉದುರಿದ ಹಾಗೆ ತಲೆಯ ಮೇಲೆ ಬಂತು. ಬಂದ ಹಕ್ಕಿ ಒಂದು ಕ್ಷಣನಿಂತು ಅಂದವಾಗಿಹ

ಆ ಎರಡು ಹಕ್ಕಿಗಳನು ಕಂಡಿತು. ಹಕ್ಕಿಗಳ ಕಂಡು "ಎಲೆ ರಾಜಾ! ಈ ತಾಯಗಿಡ ತಂಪಿನಲಿ ಎನಗೆ ತಾಣವಿಹುದೇನಯ್ಯಾ ?" ಎಂದು ಕೇಳಿಕೊಂಡಿತು.

"ಯಾರು ನೀ, ಯಾರಯ್ಯಾ?" ಎಂದು ಮಾರುದನಿ ಬರಲು "ಹಾಲಗಿರಿ, ಮೇಲಗಿರಿ, ಸಾಲಗಿರಿ ಯಾಚೆಯಲಿ ನಿಬಿಡಾಗಿ ಬೆಳೆದಿರುವ ಅಗರದ ಹಕ್ಕಿ ಬಾ. ಹಗಲ ಕಿಚ್ಚಿನ ತಾಪ ಕಳೆಯಲೆಳಸಿ ಬೆಳಗಿನಲಿ ಜಾಣಕಾಣಲು ಬಂದಿರುವೆ" ಎಂದುಸುರಲು "ವಿಶ್ವ ತಾಯಿಯು ಹಡೆದು ಸಮಗಾಗಿ ಇಟ್ಟಿಹಳು ವನಸಿರಿ ಬನಸಿರಿಯನೆಲ್ಲವನು ಕೊಟ್ಟಿಹಳು. ಆತಂಕವೇನಿಹುದು? ಏನು ಬಂಧನವಯ್ಯಾ??" ಎಂದು ಉತ್ತರವನಿತ್ತವು.

ದಿನ ಕಳೆದಹಾಗೆಲ್ಲ ಕೆಳೆಯು ಬೆಳೆಯುತ ಬಂದು ಅವರ ಬಾಳುವೆಯೆಲ್ಲ ಹಿಗ್ಗಿನಾಗರವಾಯ್ತು. ಬಾಂಧವ್ಯದಮೃತವ ಹಿಂದೆ ಅರಿಯದ ಅವರು ಇಂದದನು ಈ ಪರಿ ಅರಿತು ಸವಿಯ ತೊಡಗಿದರು. ಮುಂಜಾವ ಸಿರಿಯಲ್ಲಿ ಸಿಕರ ತುದಿಯನು ಏರಿ ಭೂಮಿತಾಯಿಯ ಸೊಬಗ ಕಣ್ತುಂಬ ನೋಡುವರು. ಹಾಲು ನೊರೆಯನುಕ್ಕಿಸುವ ತಿಳಿಯಾದ ಹೊಳೆಯೆಡೆಗೆ ಹಾರಿ ಹೋಗುವರು. ಉತ್ತಾತ್ತಿ ಬನದಲ್ಲಿ ಮತ್ತ ಕೋಕಿಲೆಗಳನು ಮಾತನಾಡಿಸುವರು, ಅಲ್ಲದೆ ಸಳೆಗೊಂಬೆಯಲಿ ಕುಳಿತು ತಮ್ಮ ತಮ್ಮೊಳೆ ಪರಿಹಾಸ ಸಿರಿಹಾಸಗಳ ಮಾಡುವರೊಮ್ಮೆ, ಚಿಗುರೆಲೆಯ ಮರೆಯಲ್ಲಿ ಅವಿತುಕೊಳ್ಳುವರು ಮತ್ತೊಮ್ಮೆ, ಮಗದೊಮ್ಮೆ ಪಣ್ಗಾಯಿಗಳ ತಂದು ಮನವಾರೆ ಸೇವಿಪರು. ಹೀಗೆ ನಡೆದಿರುವಾಗ ಒಂದು ದಿನ ಸಂದಿಸಿತು. ಆ ಒಂಟಿ ಹಕ್ಕಿ ಏನೊ ಪಡೆಯುವದಕ್ಕಾಗಿ ನಗುವ ಬಾಳಿನ ಮುಂದೆ ಅಳುವ ಬಾಳನು ತಂದಿರಿಸಿಕೊಂಡಿತು. ಆ ನಲ್ಲನಲ್ಲೆಯರ ಬಗೆಯ ಮಂದಿರದಲ್ಲಿ ಮುಗ ಮುಗಿಪ ಪೂವೊಂದು ಕಂಡುಕೊಂಡು, ಆಶಯಗೊಂಡು ತನ್ನ ತನುಮಂದಿರದೊಳು ಆ ಹೂವ ತಂದಿಟ್ಟು ಪೂಜೆ ಮಾಡಲು ಬಯಸಿ ಅವರನು ಬೇಡಿಕೊಂಡಿತು.

"ಯಾರ ಹೂವು? ಎಲ್ಲಿಹುದಯ್ಯಾ?" ಎಂದು ಕೇಳಿದರು ಆ ಅಚ್ಚು ಮೆಚ್ಚಿನ ದಂಪತಿಗಳು.

"ಹೊನ್ನ ಹೊಸರಿನ ಎಸಳು! ಹಾಲ ಬಣ್ಣದ ಅಂಚು! ಹಸರು ಬಣ್ಣದ ಪಚ್ಚೆ ದೇಟಾಗಿ ಕಂಗೊಳಿಸುವುದು. ನೀವು ಅರಿಯಲಾರಿರಿ; ನಾನರಿತು ಮೆಚ್ಚಿಹೆನು. ತಮ್ಮ ಮೊಗವ ತಾವು ಕಂಡವರುಂಟೆ?" ಎಂದು ಹಕ್ಕಿ ನುಡಿಯಲು ಆ ನೀರ ನೀರೆಯರು ಮೊಗವ ಹೊರಳಿಸಿ ಒಬ್ಬರೊಬ್ಬರ ಕಡೆಗೆ ನೋಡಿದರು. ಆಗವರ ಮೊಗದಲ್ಲಿ ಬಿಸಿನಗೆಯ ಮಿಂಚು ಹೇಗೋ ಹೊಳೆದು ಅನಿತರೊಳೆ ಮಾಯವಾಯ್ತು. ಒಡನೆಯೆ ಇದಿರ ಹಕ್ಕಿಯ ಬಗೆಬೆಂದು ಕೆನೆ ಪಕ್ಕಗಳೆರಡು ಕಳಚಿ ಹೋಗಿ ಅದು ಹಾಲುಂಡಿಯಾಗಿ ನೆಲಕ್ಕುರುಳಿತು.

"ಶಾಪಗ್ರಸ್ತನು ನಾನು. ಅಯ್ಯೋ ಶಾಪಗ್ರಸ್ತನು ನಾ. ಪ್ರೇಮದಾಸೆಗೆ ಬಂದು ಶಾಪ ಪಾಕದಲ್ಲಿ ಬಿದ್ದುಕೊಂಡೆನಲ್ಲಾ! ಮಾನವರ ಶಾಪವಿಲ್ಲವಿದು; ದೇವಲೋಕದ ಶಾಪ! ದೇವೇಂದ್ರನಿಕ್ಕಿರುವ ಕಡು ಶಾಪವಿದು!! ಬಲ್ಲವರುನನಗಂದು ಕಿವಿಯಲ್ಲಿಹೇಳಿದ್ದು ಲಕ್ಷ್ಯವಿಲ್ಲದೆ ಮರೆತೆ. ಇಂದು ಅರಿವಾಗಿಹುದು. ಅರಿತ ಗಂಡಾಂತರವ ಮೆಟ್ಟಿ ತುಳಿಯಬಹುದೆಂಬ ಹಮ್ಮು ನನ್ನ ಭಾವನೆಯಲ್ಲಿ ಕುಣಿಯುತಲಿತ್ತು. ಅದರಂತೆ ದುರ್ವಿಧಿಯು ನನಗೀ ದುರ್ಗತಿಯು ತಂದಿಕ್ಕಿತು.

"ಇಂದ್ರ-ಬನದ ಹಣ್ಣುಗಳನ್ನು ನಾನು ಸವಿಯ ಬೇಕೆಂದೆ. ಸಿರಿ ಸೊಬಗಿನ ಬನದಲ್ಲಿ ಇಂಚರದಿ ಹಾಡ ಬಯಸಿದೆ. ರನ್ನ ಹಕ್ಕಿಗಳಲಿ ಕೂಡಬಯಸಿದೆ ಅದಕಾಗಿ ದೇವೇಂದ್ರನು ಶಾಪಕೊಟ್ಟಿಹನು. 'ಪ್ರೇಮವನು ಬಯಸಿದಾಗ ಅದು ಸಿಗದಿರಲು ರೆಕ್ಕೆ ಕಳಚಿ ನೀನು ನೆಲಕ್ಕುರುಳು' ಎಂದು ಶಾಪವಿಹುದು. ಅದಕಿಂತು ಉರುಳಿದೆನು. ನಿಮ್ಮ ಪ್ರೇಮದ ಸವಿದುತ್ತು ಈಗಲೂ ನನ್ನ ಪಕ್ಕಗಳ ಚಿಗುರಿಸ ಬಲ್ಲವು. ದಯದೋರಿ ದೇವೇಂದ್ರ ಇನಿತು ಉಶ್ಶಾಪನಿಟ್ಟಿಹನು. "ಲಭಿಸದ ಪ್ರೇಮ ಲಭಿಸಿದಾಗ ಕಳಚಿರುವ ಪಕ್ಕಮತ್ತೆ ಮೂಡುವವು.

ಆಗ ನನ್ನ ಬನದ ಬಟ್ಟೆ ಮತ್ತೆ ಕಂಗೊಳಿಪುದು.” ಎಂದಂದಿಹ ನಂತೆ. ಆದಕಾಗಿ ನನ್ನ ನಚ್ಚಿನ ಎಲೆದಂಪತಿಗಳೆ! ಪ್ರೇಮದಲಿ ಹೃದಯುವರಾನು ಇತ್ತು ಎನ್ನ ನೀವು ಉಳಿಸಿರಯ್ಯಾ ಆಗ ನಾವು ಮೂವರು ಮುಗಿಲಿನಾಚೆಗೆ ಹಾರಿ ಮೂಲೋಕವ ನೋಡೋಣ ವಂತೆ. ಭುವನದೆದೆಯೊಳಗಿರುವ ಪಾರಿಜಾತದ ಹೂವ ಹುಡು ಕೋಣವಂತೆ. ಇಂದ್ರಬನದ ಹಣ್ಣುಗಳ ತನಿರಸವ ಮನದಣಿ ಹೀರೋ ಣವಂತೆ. ಬೆಳದಿಂಗಳ ಕಡಲಲ್ಲಿ ಹಿಗ್ಗಿನಲಿ ಈಸೋಣವಂತೆ. ಎನ್ನ ಹೃದಯದ ಅರಸು ಅರಸಿಯರೇ, ಈ ಅಮಳ ಸಾಗರದ ಆಚೆಯಲಿ ಹೊಗರಿಡುವ ಪೀತ ಸಾಗರವಂತೆ. ಅದರಾಚೆ ಕೆಂಪು ಸಾಗರವಂತೆ. ಅದಕೂ ಆಚೆ ನೀಲ ಸಾಗರವಂತೆ. ಹೀಗೆ ಸಪ್ತ ಸಾಗರಗಳಾಚೆ ಯಲ್ಲಿ ಒಂದು ಬನವಿಹುದಂತೆ. ಅದನು ಕೇಳಿರುವಿರಾ? ಅಹಾ ಏನು ಸೌಂದರ್ಯವಲ್ಲಿ! ಮುಗಿಲ ಮುಟ್ಟುವವರೆಗೆ ಏಸೊ ತರು ಬೆಳದಿಹವು! ಸೌರಭವ ಸೂಸುತಲಿ ಎನಿತೊ ಅರಲರಳಿಹವು!! ಪಣ್ಣಾಯಿಗಳಿಗಲ್ಲಿ ಮಿತಿಯಿಲ್ಲ. ಪನ್ನೀರ ಝರಿಯೇಸೊ ಎಣಿಕೆಯಿಲ್ಲ. ದೇವೇಂದ್ರ ನೊಮ್ಮೊಮ್ಮೆ ಆದನೋಡ ಬಯಸಿ ಶಚಿಯೊಡನೆ ಬರುಲಿಹನಂತೆ. ವನವೆಲ್ಲ ವಿಹರಿಸಿ ಮನದಣಿದು ರತ್ನ ಶಿಲೆಗಳಮೇಲೆ ಕೂಡುವನಂತೆ. ಶಚಿಯೊಡನೆ ಸರಸವಾಡುವನಂತೆ, ಕೋಮಲವಾದ ಹೂಗಳನ್ನಾರಿಸಿ ತಂದು, ಆಕೆ ದೂರದಲಿ ನಿಂತು ಇಂದ್ರನ ಮೇಲೆಸೆದು ರಸನಗೆಯು ನಕ್ಕು ನಲಿಯುವಾಗ ಅವಳ ಅಧರಕಾಂತಿ ಚಿಮುಕಿಸಲು ಅದರ ಬೆಳಕಿ ನಲ್ಲಿ ಕೋಗಿಲೆಗಳು ಹಾಡುವವು. ಹಕ್ಕಿಗಳು ಮಾತನಾಡುವವು. ನವಿ ಲುಗಳು ನಿಮಿರೇರಿ ನರ್ತಿಸುವವು. ಸಹೋದರಾ! ನನ್ನ ಸಹೋದರಿ!! ಎನಗೆ ಪ್ರೇಮವನಿತ್ತು ಈ ಶಾಪಕೂಪದ ತಳದಿಂದ ಎನ್ನನುದ್ಧರಿಸಿದರೆ ಸಪ್ತ ಸಾಗರಗಳ ಸೌಂದರ್ಯವನ್ನು ನೋಡುತ್ತ ಅವುಗಳನು ದಾಟಿ ನಾವು ಒಂದಾಗಿ ಆ ವನದೆಡೆಗೆ ಹೋಗೋಣ. ತರುಗಳಿಂದ ತರು ಗಳಿಗೆ ಹಾರೋಣ. ಪುಷ್ಪಗಳ ಮೂಸಿ ಮೈ ಮರೆಯೋಣ. ಪಣ್ಣಾ ಯಿಗಳ ಮೆಲಿದು ಮತ್ತರಾಗೋಣ. ಬನದಾಚೆಗಿರುವ ಹಾಲ ಹೊಳೆಯಲಿ ನೀರನೀಂಟ ನಲಿನಲಿದು ನೆಗೆಯೋಣ.'' ಎಂದು

ನೆಲಕ್ಕುರುಳಿದ ಹಕ್ಕಿ ಮೋರೆ ಮೇಲಕ್ಕೆತ್ತಿ ಹೊನ್ನ ಚುಂಚುಗಳನು
ಬಿಚ್ಚಿ ಬಿಚ್ಚಿ ಕಣ್ಣೀರತಂದು ಹೇಳಿಕೊಂಡಿತು.

"ಏನು ಅನ್ನುವಿ ಹಕ್ಕಿ? ನೀನಂದ ಮಾತುಗಳ ಅರ್ಥವೇನಿ
ಹುದು? ನಿನ್ನ ಆಳವಾದ ಬಗೆ ನನಗೆ ತಿಳಿಯಬಾರದು ಅಯ್ಯಾ!"
ಎಂದು ಆ ದಂಪತಿಗಳು ತಮ್ಮ ತಮ್ಮ ಕಡೆ ನೋಡುತ್ತ ಮೆಲು
ಮೆಲನೆ ಮಾತನಾಡಲು "ನನ್ನ ಮಾತಿನ ಅರ್ಥ ನಿಮಗಾಗದೆ?
ಎಲ್ಲಿಯೂ ಆಗದ ನನ್ನ ಮಾತಿನ ಅರ್ಥ ಇಲ್ಲಿಯೂ ಆಗದೆ?? ನನ್ನ
ಬಂಧುವೆ! ನನ್ನ ಭಗಿನಿಯೆ!! ಸತ್ಯವಾಗಿ ನಿಮ್ಮ ನಾನು ಪ್ರೀತಿಸು
ವೆನು. ಸ್ವಾರ್ಥ ಮೋಹಗಳಿಗಿಲ್ಲಿ ಇನಿತು ಕೂಡ ಇಂಬಿಲ್ಲ. ಅಚ್ಚ
ನಿಸ್ವಾರ್ಥ ಪ್ರೇಮವಿಹುದು. ಭಕ್ತಿಯಿಹುದು. ದೇವರಾಗಿ ಭಕ್ತಿಯ
ಮಾಡಿಸಿಕೊಳ್ಳಿರಿ. ನಾನು ಭಕ್ತನಾಗಿ ಭಕ್ತಿಯ ಮಾಡುವೆ.
ನಿಮ್ಮ ಹೃದಯ ಮಂದಿರದಲ್ಲಿಯ ದೇವನಾನು ಪೂಜಿಸಲು ಎನಗೆ
ಎನಿತು ಹಿಗ್ಗಾಗುವುದು ಬಾಯಿಯಲಿ ಬಣ್ಣಿಪೆನೆ!................"
ಎಂದುಸುರುವಾಗ ಕಣ್ಣೀರು ಉಕ್ಕಿ ಹರಿವವು. ಕುತ್ತಿಗೆಯ ಸಿರ
ಗಳುಬ್ಬುವವು. ಸ್ವಲ್ಪ ತಡೆದು "ಬಂಧುವೆ! ಎನ್ನ ತಾಯಿ!! ನನ್ನ
ತಾಯಿ ತೊಟ್ಟಿಲಿಂದ ಇಲ್ಲಿಯವರೆಗ ಸುಖವು ಏನಿಹುದು ನಾನರಿಯೆ!
ನನ್ನ ತಂದೆಯು ಮಡದಿ ಮಕ್ಕಳ ಕೂಡ ಇಲ್ಲಿಗೆ ದೂರದಲ್ಲಿರುವ
ಒಂದು ರಮ್ಯವಾಗಿಹ ಕೊಳದಡಿಯಲ್ಲಿ, ವಿಶಾಲವಾಗಿಹ ಅಶ್ವತ್ಥ
ವೃಕ್ಷದೊಳಗೆ ಮನೆಮಾಡಿಕೊಂಡಿಹನು. ಆತನಿಗೆ ಮಕ್ಕಳು ನಾವು
ನಾಲ್ವರು. ನನಗೆ ಹಿರಿಯರು ಇಬ್ಬರಿಹರು ಒಬ್ಬ ಚಿಕ್ಕ ತಮ್ಮನಿಹನು.
ಮಡದಿ ಮಕ್ಕಳ ಕೂಡ ಹಿಗ್ಗಿನಲಿ ಆ ತಂದೆ ಬಾಳುವೆಯ ಮಾಡ
ಬಹುದಾಗಿತ್ತು, ತರುಗಳಲಿ ಹಾರಾಡಿ, ಕೊಳಗಳಲಿ ಜಿಗಿದಾಡಿ, ಹೂ
ಗಳನು ಈಡಾಡಿ ಹರುಷ ಹೊಂದಬಹುದಾಗಿತ್ತು. ಅಯ್ಯೋ!
ದುರ್ದೈವಿ ಆತಾ. ಆ ಸೃಷ್ಟಿದೇವಿಯ ಸೊಬಗನುಣ್ಣುವ ಸುದೈವ ಆತ
ಗಿರಲಿಲ್ಲ. ಆ ಕಾಲದಲಿ ಎತ್ತನೋಡಿದಡತ್ತ ಹಣ್ಣುಗಳ ಬರವೇ
ಬರ. ಫಲಿತು ನಿಂತಿಹ ಆ ಎಲ್ಲ ತರುಮರಾದಿಗಳು ಒಮ್ಮೆಲೆ ತಮ್ಮ

ಹಣ್ಣುಗಳನೆಲ್ಲ ಭೂತಾಯಿಯ ಉಡಿಯಲ್ಲಿ ಉದುರಿಸಿದವು. ಮುಂದೆ ಪಣ್ಣಾಯಿ ಸಿಗದಿರಲು ಹೊಟ್ಟೆಯುರಿ ಸಹಿಸದಲೆ ಎಷ್ಟೊ ಹಕ್ಕಿಗಳು ಮಕ್ಕಳನು ಕಟ್ಟಿಕೊಂಡು ಬೇರೆ ವನಗಳ ನರಸಿ ಹಾರಿ ಹೋದವು. ನನ್ನ ತಂದೆ ಅಂಥಾ ಸಾಹಸವ ಮಾಡಿದನೆ? ಇಲ್ಲ. ಹಿರಿಯರಿರುತಿಹ ಬನವ ಬಿಡಬಹುದೆ? ಬಿಡಲು ಬರುವುದೆ? ಎಂದೆಂದು ಅದನ್ನು ಸಹಿಸುತ್ತ ಅಲ್ಲೆ ಇರಲು ಮನಮಾಡಿದನು. ಹೀಗೆ ಏಸೊ ದಿನ ಕಳೆದವು. ಎಷ್ಟೊ ಸಂತಾಪ ಹೊಂದಿದೆವು. ಹೊಟ್ಟೆಯುರಿ ದಗದಗಿಸಿ ನಮ್ಮ ಪ್ರಾಣ ಸುಟ್ಟುಸುಣ್ಣಾಗಲು ಕಣ್ಣು ಗಳು ಕತ್ತಲೆಗೊಂಡು ಆ ರಮ್ಯ ವನವು ನಮಗೆ ಮಸಣವಾಯಿತು. ಅಂಥ ಹೊತ್ತಿನೊಳು ಒಬ್ಬ ಬೇಡ! ಕಪ್ಪು ಬಣ್ಣದ ಬೇಡ!! ಕರಾಳ ರೂಪದ ಬೇಡ!!! ಆಹಾ! ಏನು ಅವನ ರೂಪು ನೆನಿಸಲಿನ್ನೂ ನನ್ನ ಹೃದಯ ನಡಗುವುದು. ಕವಡಿಯಂಥಾ ಕಣ್ಣು ಕೊರಡಿನಂಥಾ ಹಲ್ಲು!! ಹೆದರಿನಂಥ ಮೂಗು!!! ಗುಡುಗಿನ ಧ್ವನಿಯಿಂದ ಚೆಲು ವಾದ ಹಕ್ಕಿಗಳನ್ನು ಕೊಂಡೆಯ್ಯ ಬಯಸಿ ಬನವ ಸುತ್ತತೊಡಗಿ ದನು. "ಕೊಲುವವನಲ್ಲ, ನಾನು ಕೊಲುವವನಲ್ಲ. ಚೆಲುವಾದ ಮರಿಗಳನು ಸಾಕಕೊಟ್ಟವರಿಗೆ ಬರದ ಬೇಗೆಯ ನಾರಿಸುವ ಇನಿ ಯಾದ ಹಣ್ಣುಗಳನ್ನು ಕೊಡುವೆನು ನಾನು" ಎಂದು ಕೂಗುತ್ತ ಗಿಡದಿಂದ ಗಿಡಕ್ಕೆ ಅಲಿಯತೊಡಗಿದನು. ಅದಕೇಳಿ ನನ್ನ ತಂದೆಯ ಬಾಯಿಗೆ ನೀರೊಡೆಯದಿರಲಿಲ್ಲ. 'ಪ್ರಾಣಕಿಂತ ಹಿರಿಯ ವಸ್ತು ಜಗದಿ ಇಹುದೆ?' ಎನ್ನುವ ನಾಡ ನುಡಿಯೊಳು ಸತ್ಯವಿಲ್ಲದೆ ಇಲ್ಲ. ಅದಕಂತಲೇನೆ ನನ್ನನಾತನು ಹಣ್ಣಿಗಾಗಿ ಮಾರಲೆನಿಸಿದನು. 'ಪಂಜರದೊಳಾದರೂ ಹೊಟ್ಟೆ ತುಂಬಲಿ ಇವಕೆ' ಎನ್ನುವ ಆಶೆ ಒಡ ಲೊಳಿಲ್ಲದಿರಲಿಲ್ಲ.

ನನ್ನ ಬಂಧುಗಳಾದ ಆ ಮೂರು ಮಕ್ಕಳನು ಮಾರಿದಂತೆ ನನ್ನನ್ನು ಮಾರಬಯಸಿದಾಗ ನಾನು ಆತನೆಡೆ ಓಡಿಹೋಗಿ ಬಿಗಿ ಯಾಗಿ ಅಪ್ಪಿಕೊಂಡು ಗದ್ದ ಹಿಡಿದು ಮುದ್ದಾಡಿ, ಕಣ್ಣಿನಲಿ ನೀರ

ನುರುಳಿಸಿ "ಅಪ್ಪಾ! ನನ್ನಮಾರುವಿಯಾ? ಬೇಡ ಬೇಡ! ನಾನೆಂದೂ ಪಣ್ಣಾಯಿ ಬೇಡೆ. ಹೊಟ್ಟೆಯುರಿಯುವುದೆಂದು ಹೇಳಿಕೊಳ್ಳೆ. ನಿನ್ನ ದುಃಖದಲ್ಲಿ ಭಾಗಿಯಾಗುವೆ ತಂದೆ! ಇದನು ನೋಡಲು ನಿನ್ನಿಂದಾಗದಿದ್ದರೆ ನನ್ನನ್ನು ಬಿಟ್ಟುಕೊಡು. ನಾನಾವ ಬನವಲ್ಲಾದರೂ ಹಾರಾಡಿ ಹೊತ್ತು ಗಳೆಯುವೆನು." ಎಂದೆನ್ನಲು "ನಿನಗಿಲ್ಲಿ ಎಳ್ಳಿನಿತು ದುಃಖವಿಲ್ಲ ಮಗುವೆ! ಹೊಟ್ಟೆಗಿಲ್ಲದೆ ಮರುಗಿ ಇಲ್ಲಿ ಸಾಯುವುದಕಿಂತ ರುಚಿಗಾಯಿಗಳ ತಿಂದು ಅಲ್ಲಿ ಬದುಕುವುದು ಮೇಲು. ನಿನ್ನ ನಾತನು ರಾಜಮಂದಿರಕೊಯ್ದು ಒಪ್ಪಿಸುವನಂತೆ ರಾಜ ಕನ್ನೆ ಹಕ್ಕಿಯೊಂದು ಬಯಸಿ ಬೆಸಸಿಹಳಂತೆ. ಅದಕಾಗಿಯೇ ಒಂದು ಹೊನ್ನ ಪಂಜರವ ಮಾಡಿಸಿಹಳಂತೆ. ಅದಕೆ ಪಚ್ಚೆಗಳ ಕೆಚ್ಚಿಸಿಹಳಂತೆ. ರನ್ನಕುಂದಣವನಿರಿಸಿಹಳಂತೆ. ಆನಂದ ವನದಲ್ಲಿ ಹಾಲುಗಲ್ಲಿನ ಮನೆಯಕಟ್ಟಿಸಿ ಮೇಲಟ್ಟದೊಳು ನಿನ್ನ ಪಂಜರವ, ಕೇತಕಿಯ ಬನದ ಕಡೆ ಕಟ್ಟುವಳಂತೆ. ಆಗ ನೀನಲ್ಲಿ ಕುಳಿತು ಹೊರಗೆ ಸುಳಿಯುವ ಅದರ ಸೌರಭವನ್ನು ಮೂಸಬಲ್ಲಿಯಂತೆ ಇರುಳಿನಲಿ ಚಕ್ಕಂದವಾಡುತಿಹ ಚಿಕ್ಕೆಗಳ ಚನ್ನಾಟವನು ಕಾಣಬಲ್ಲಿಯಂತೆ. ಮೋರೆಯನು ಮೇಲಕೆತ್ತಿ, ಪಂಜರದ ಸಳಿಗಳಲಿ ಇಣಿಕಿ ಇಕ್ಕಿ, ಕಣ್ಣನುಲುಗಿಸುವಾಗಲೂ ಗೋಣ ಹೊರಳಿಸಿ ಚುಂಚುವನು ಅರತೆರೆದು ಪಕ್ಕಗಳ ಸರಿಸುವಾಗಲೂ ಮುತ್ತಿನಲಿ ಹೆಣೆದಿರುವ ಪಲ್ಲಂಗದ ಮೇಲೆ ಸುಪ್ಪತ್ತಿಗೆಯ ಹಾಸಿಗೆಯಲಿ, ತೋಳ ತಲೆಗಿಂಬು ಮಾಡಿ ಮಲಗಿರುವ ಆ ಕುವರಿ ನಿನ್ನ ನೋಡಿ ಆಗ ಎಷ್ಟು ಹಿಗ್ಗುವಳು ಮಗು! ಆಗ ನಿನಗೆಷ್ಟು ಆನಂದ !! ಕಂದಾ! ನೀನು ಹಸಿದು ಕಿಲಿಕಿಲಿಸುವಾಗ ಆ ಕುವರಿ, ಕೇತಕಿಯ ಬಣ್ಣದ ಆ ಕುವರಿ, ಜಡೆಹಾಕಿಕೊಳ್ಳುವುದನು ಬಿಟ್ಟು ಕೊಟ್ಟು ಜೋಲುದುರುಬನು ಬಿಚ್ಚಿ ಬೆನ್ನಲಿ ತೂಗಿಸುತ, ಮುಖವ ಮುದ್ದಿಡಬಂದ ಕಿರಿಗೂದಲುಗಳನು ಹಿಂದಕಟ್ಟುತ, ಚಂಚಲವಾಗಿಹ ಬೊಗಸೆ ಗಣ್ಣುಗಳನು ತಿರುಗಿಸಿ, ನವಿನಗೆಯ ನಕ್ಕು, ನೀಳವಾದ ಬಲಗೈಯನ್ನು ಬೀಸಿ, ಎಡಗೈಯಲಿ ಚಿನ್ನದ ತಾಟನು

ಹಿಡಿದು ದಾಳಿಂಬ ದ್ರಾಕ್ಷ ರಸಗಳನು ನಿನ್ನೆಡೆ ತರುವಳಂತೆ. ವಜ್ರ ಕೀಲಿಯು ಬಿಚ್ಚಿ ನಿನ್ನ ಪಂಜರದ ಬಾಗಿಲ ತೆರೆದು, ಆ ಕೋಮಲೆಯು ತನ್ನ ರತ್ನ ಕಡಗದ ಕೈಗಳಲಿ ದ್ರಾಕ್ಷರಸದ ಬಟ್ಟಲನು ಹಿಡಿದು ಪಂಜರದಲ್ಲಿಡುವಾಗ ನಸುಕೂಡ ಮಾಸದ ಆವಳ ಕೈಗೆ ಮೃದುವಾಗಿ ಮುತ್ತಿಟ್ಟೆಯಾದರೆ ನಿನಗೆಷ್ಟು ಸುಖಗೊತ್ತೆ ಮಗು! ಅದಕಾಗಿ ನನ್ನಾಜ್ಞೆ ಮೀರದಿರು. ಆತನೊಡಗೂಡಿ ಸುಖವಾಗಿ ಬಾಳು ಕಂದಾ!!" ಎಂದು ನನ್ನ ತುಟಿ ಹಿಡಿದು ಬುದ್ಧಿ ಹೇಳುವಾಗ ನನಗೆ ಮುನಿಸು ಬರಲು ಅವನ ಬಿಟ್ಟು ದೂರ ಸರಿದೆ. ಆಗ ನನ್ನ ದೇನಿವೆಯುಲ್ಲವನ್ನೂ ಹೇಳಿಕೊಂಡು ತಂದೆ! ಪ್ರಕೃತಿ ದೇವಿಯ ಸಹಜ ಸೌಂದರ್ಯಕ್ಕಾನೆಗೊಂಡ ನನಗೆ ರಾಜಭವನದಲ್ಲಿರುವ ಯುವತಿ ಯರ ಕೃತ್ರಿಮ ಸೌಂದರ್ಯ ಬೇಕಿಲ್ಲ ನೋಡು. ಈ ಮುಕ್ತ ಸೃಷ್ಟಿ ಯಲ್ಲಿ ಮನವಾರೆ ಈಜುವುದನು ಬಿಟ್ಟು ಹೊನ್ನ ಪಂಜರದ ಬಂಧ ನಕ್ಕೊಳಗಾಗಲಿಯಾ? ಲೋಹ ಪಂಜರವಿದ್ದರೇನು ಹೊನ್ನ ಪಂಜರ ವಿದ್ದರೇನು ಎಲ್ಲವೂ ಬಂಧನವೇ ಅಲ್ಲವೆ? ದ್ರಾಕ್ಷ ದಾಳಿಂಬಾದಿ ಮಧುರ ಪಣ್ಗಳ ಮೆಲಿದು ಯುವತಿಯರ ಮನತಣಿಪ ಮನೆ ಹಕ್ಕಿ ಯಾಗುವುದಕ್ಕಿಂತ ಕಹಿಗಾಯಿಗಳೆ ಇರಲಿ, ಏನೆ ಇರಲಿ ಸಿಕ್ಕುದನು ತಿಂದು ಸ್ವಾತಂತ್ರ್ಯದಲಿ ಬನದಿಂದ ಬನಕ್ಕೆ ಹಾರುವ ಬನದ ಹಕ್ಕಿ ಯಾಗುವುದೆ ನನಗೆ ಹಿರಿದಾಗಿಹುದು. ಅದಕಾಗಿ ತಂದೆ! ಎನ್ನನೀಗ ಬಂಧನದಿ ಬಂಧಿಸಬೇಡ." ಎಂದು ನಾನೆನ್ನಲು ಇದಕೇಳಿ ನನ್ನ ತಂದೆಗೆ ಕಣ್ಣೀರು ಮಿಂಚಿ ದೃಷ್ಟಿ ಮಸುಕಾಗಲು ಕಣ್ಣನೊರಿಸಿ ಕೊಳ್ಳುವನು. ಅದೆ ಸಂಧಿಯನೆ ಸಾಧಿಸಿ ನಾನು ಮನೆಯ ಹೊರ ಗಾದೆ. ಆಗ ನನ್ನ ತಂದೆ ತಾಯಿಗಳು ಎಷ್ಟೋ ಅತ್ತಿರಬೇಕು! ಕರೆದಿರಬೇಕು!! ಆದರೆ ಅದನ್ನಾರು ಬಲ್ಲರು?

ಮನೆಯ ಹೊರಬಂದವನು ಎಲ್ಲಿಯೂ ನಿಲ್ಲದೆ ನಿಡಿದಾಗಿ ಮುಗಿಲ ಕಡೆಗೇ ಹಾರಿದೆ. ಅಲ್ಲಿ ನನ್ನ ನಚ್ಚಿನ ಕೆಲಗೆಳೆಯರು ನನ ಗಾಗಿ ಹಾದಿ ಕಾಯುತಲಿದ್ದರು. ಅವರು..............................

ಬಂಧುವೆ! ಮುಂದಿನ ಕತೆಯದು ಎಷ್ಟು ದುಃಖದ ಕತೆ! ಹೇಳಲಾರೆ ನಾ ಹೇಳಲಾರೆನಪ್ಪಾ!!! ಏಸು ವನಗಳ ತಿರುಗಿದೆ. ಏಸು ಗಿರಿಗಳನ್ನು ಸುತ್ತು ಹಾಕಿದೆ. ಕಂದರಗಳಾಳನೇಸು ನೋಡಿದೆ. ಅಹಾ! ಏನು ದೃಶ್ಯ!!...............................ಮೊದಲು ತುಂಗಾ ತೀರಕ್ಕೆ ಹೋದೆ. ಅಲ್ಲಿ ಕೆಲವು ದಿನವಿರುವುದರಲ್ಲಿ ನನ್ನ ಹಿರಿಯಣ್ಣ ನನ್ನ ಹುಡುಕಬರಲು ಬೆಳ್ಳಿಗಿರಿಯ ಹತ್ತಿ ಆಚೆ ಹಾರಿದೆ. ಅಲ್ಲಿ ಕೆಲದಿನ ವಿದ್ದು, ಅದೇ ಶೃಂಗ ಸಾಲಿನಲ್ಲಿರುವ ಚಂದ್ರುಗಿರಿಯ ಹತ್ತಿರವಲ್ಲಿ ಆಲಮರಗಳ ಬನವೊಂದುಂಟು, ಅಲ್ಲಿಯೂ ಕೆಲದಿನ ಕಳೆದೆ. ಅಲ್ಲಿಂದ ನವರಸ ಬನಕ್ಕೆ ಹಾರಿದೆ. ಅಲ್ಲಿಂದ ಶಾಂತಿ ವನವನ್ನು ಸೇರಲು ಹವಣಿಸಿದೆ. ವಿಧಿಯು ಅಡ್ಡಬರಲು ಹೇಮುಕೂಟಕ್ಕೆ ಹಾರಿದೆ. ತದನಂತರ ಮಾತುಂಗ ಪರ್ವತ ಹತ್ತಿದೆ. ಹೀಗೆ ಏಸೊ ಬನಗಳನು ಸುತ್ತಿ ತಿರುಗುವುದರೊಳಗೆ ದ್ವಾರಕೋಟೆಯ ರಾಣಿಯ ಉಪವನವನ್ನು ಸೇರಿ ಅಲ್ಲಿ ತೂಗಬಿಟ್ಟ ಚಿತ್ರಪಟಗಳನು ನೋಡಲು ಮರಳುಗೊಂಡು ಅನ್ನ ನೀರುಗಳನು ಮರೆತು ಸೊರಗಿದೆ. ಆಗ ನಾನು ಪಟ್ಟ ಕಷ್ಟ ಅಷ್ಟಿಷ್ಟಲ್ಲ ಅಣ್ಣಾ! ರಕ್ತ ನೀರಾಯ್ತಲ್ಲಿ. ಅಲ್ಲಿಂದ ಹೇಗೋ ಒಮ್ಮೆ ಹಾರಿ ಬಂದೆ. ಆಗ ತಾಯಿಯನು ಕಾಣುವ ಹಂಬಲ ಹಿರಿದಾಗಲು ಕರುಳು ಕೇಳಲಿಲ್ಲ. ಅವಳಿರುವ ಬನದೆಡೆಗೆ ಹೋದೆ. ಅವಳು ಅಲ್ಲಿ ಪಡುತ್ತಿದ್ದ ಬನ್ನವನ್ನೇನೆಂದು ಬಣ್ಣಿಸಲಿ! ಆಕೆಯ ಕಷ್ಟವನ್ನು ಪರಿಹರಿಸಲೆಂದು ವಿಷಪರ್ವತದ ಗುಹೆಯೊಂದರಲ್ಲಿ ಮೂರು ಸಂವತ್ಸರ ತಪವಿದ್ದೆ. ಅಲ್ಲಿ ಹೊಂದಿದ ಸಂತಾಪ, ಪಟ್ಟಕಷ್ಟ, ಏನು ಹೇಳಲಿ! ಈ ಬಾಯಿ ಸಾಲದು ನನಗೆ. ಹೀಗೆ ಬೆಂದ ಹೃದಯ, ನೊಂದ ಮನಸ್ಸು, ಹೊಂದಿದ ಕಷ್ಟವೆಲ್ಲವನು ಸಹಿಸಿ ಸಹಿಸುತ್ತಲಿರುವಾಗ "ಪ್ರೇಮವೆನ್ನುವ ವಸ್ತು ಜಗದಿ ಇಹುದೆ? ಅದು ನಾನು ಸವಿಯಬಲ್ಲೆನೆ?" ಎನ್ನುವ ನನ್ನ ಹಿರಿದಾದ ಆಶೆ ಹೆಚ್ಚಾಯಿತು. ಅದಕಾಗಿ ಕಂಡಕಂಡವರನೆಲ್ಲ ಕೇಳತೊಡಗಿದೆ. ಸರ್ವರನ್ನೂ ತಾಯಿಯೆಂದೂ, ತಂದೆಯೆಂದೂ ಅಣ್ಣನೆಂದೂ, ತಮ್ಮನೆಂದೂ ಭಾವಿಸಹತ್ತಿದೆ. ನನ್ನನ್ನು ಅಣ್ಣನನ್ನಾಗಿ

ಇಲ್ಲವೆ ತಮ್ಮನನ್ನಾಗಿ ಅಥವಾ ಗೆಳೆಯನನ್ನಾಗಿ **ಮಾಡಿಕೊಂಡು** ತಮ್ಮ ದುಃಖದಲ್ಲಿ ದುಃಖಿಯನ್ನಾಗಿಯೂ ಸುಖದಲ್ಲಿ ಸುಖಿಯನ್ನಾಗಿಯೂ ಮಾಡಿಕೊಳ್ಳುವ ಮಮತಾಳುಗಳಾರಾದರೂ ದೊರೆಯುವರೇ ಎಂದು ಹುಡುಕಿದೆ. ಎಲ್ಲೆಲ್ಲಿಯೂ ನಿರಾಶೆ! ಎಲ್ಲೆಲ್ಲಿಯೂ ಸ್ವಾರ್ಥ! ಮೋಹದಲಿ ಮುಚ್ಚಿರುವ ಪ್ರೇಮವನು ಕಂಡು ಕಂಗೆಟ್ಟು ನಾನೀ ಬನಕ್ಕೆ ಬಂದೆ. ಬಂದು ನಿಮ್ಮನು ಕಂಡು ಹರುಷಗೊಂಡೆ. ನನ್ನ ತಪ್ತ ಹೃದಯವನ್ನು ಸಂತೈಸುವ ಸ್ಥಾನ ಇಲ್ಲಿಹುದೆಂದು ನಾನರಿತೆ. ಅರಿತು ನಿಮ್ಮಯ ಬಗೆಯ ಹೂ ಕಂಡೆ. ಅದ ಬಯಸಿ ಭೂಮಿಗಿಳಿದೆ. ಎಲೆ ದಂಪತಿಗಳೆ! ಇನಿತು ದುಃಖಗಳ ಸಹಿಸಿ ಸಹಿಸಿ ಪ್ರೇಮವನು ಯಾಚಿಸುತಿರಲು ಎನಗೆ ಪ್ರೇಮ ಭಿಕ್ಷೆಯನಿತ್ತು ನನ್ನನ್ನುಳಿಸಿಕೊಳ್ಳಿರಿ.'' ಎಂದು ಮೇಲೆ ಮುಖಮಾಡಿ ಕಣ್ಣೀರು ಗರೆಯಿತು. ಆಗ ಆ ದಂಪತಿಗಳು—

" ನೀನನ್ನುವ ಮಾತು ಕೇಳಿದರೆ ಎಲೆಗೆಳೆಯಾ, ಎಮಗೆ ಕನಿಕರ ಬರುತಿಹುದಲ್ಲದೆ ನಿನ್ನರ್ಥದ ಪ್ರೇಮ ನಮ್ಮ ಹೃದಯದಲ್ಲಿ ಒಡಮೂಡದು. ನಿನ್ನಪ್ರೇಮದ ಅರ್ಥ ನಮಗಾಗದು. ಹೆಂಡರಲಿ ಮಕ್ಕಳಲಿ ಪ್ರೇಮ ಮಾಡುವ ಬಲ್ಲೆವು ನಾವು. ಆದರೆ, ಅದು ಎಲ್ಲ ಮೋಹವೆಂಬುದು ಅರಿತಿಹೆವು " ಎಂದು ಹೇಳಿ ಆ ಎರಡು ಹಕ್ಕಿಗಳು ಸುಮ್ಮನಾಗುವವು.

ಕಾಲನ ಬಾಯಿಯಲಿ ಇಂಥ ಏಸೊ ದಿನಗಳು ಬಂದು ಮುಳುಗಿ ಹೋದವು. ಎಷ್ಟೊ ಸಾರಿ ಸೂರ್ಯ ಮೂಡಿ ಮೂಡಿ ಮರೆಯಾದನು. ಆದರೇನು, ಆ ಹಕ್ಕಿಯ ದುಃಖಗಳುಮಾತ್ರ ಇನಿತುಕೂಡ ಇಳಿಯಲಿಲ್ಲ ಪ್ರೇಮಯಾತನೆ ಶಾಂತವಾಗಲಿಲ್ಲ ಆ ದಂಪತಿಗಳು ಒಮ್ಮೊಮ್ಮೆ ಪ್ರೀತಿಯಿಂದ ಮಾತನಾಡಿದರೆ ಇದಕೆ ಸ್ವರ್ಗಕಿಂತಲು ಮಿಗಿಲಾಗುವುದು. ಇಲ್ಲದಿರೆ ನರಕಕಿಂತಲು ಕೀಳು ಅದಕ್ಕೆ. ಅವುಗಳನ್ನಗಲಿ ಒಂದು ಕ್ಷಣಕೂಡ ಇರಲು ಇದಕೆ ಮನವಿಲ್ಲ. ಎಲ್ಲಿಯಾದರೂ ಆ ಬನದಾಚೆ ಅವುಹೋದರೆ ಅವುಗಳತ್ತ ಇದರ ಮನವಿರುತಿಹುದು.

"ಅವುಗಳಿಗೆ ಕ್ಷೇಮವಿರಬಹುದಷ್ಟೆ? ಅವು ನನ್ನ ವಿಷಯವಾಗಿ ಮಾತನಾಡುತಿರಬಹುದಷ್ಟೆ?? ಈಗ ಹೊರಟಿರಬಹುದಷ್ಟೆ???" ಎಂದು ಏನೊ ಪರಿಯಾಗಿ ಭಾವಿಸುವದು. ಬರಲು ಬಹಳ ಹೊತ್ತಾದರೆ ಎದ್ದೆದ್ದು ಹಾದಿ ನೋಡುವದು. ಕೂತುಕೊಂಡು ಚಿಂತಿಸುವದು. ಮತ್ತೆ ನೋಡುವದು ಸುಳಿವು ಕಾಣದಿರೆ ಮನದಿ ಕಳವಳಿಸುವದು. ಅವರ ಮಾತಿನಲಿ, ರೀತಿಯಲಿ ವ್ಯತ್ಯಯ ಬರಲು ಕೋಟಿಸಿಡಿಲಿನ ಏಟು ಸಹಿಸುವುದು. ಒಡಲಲ್ಲಿ ಅಲಗನಿಟ್ಟು ತಿರುವಿದಂತಾಗಲು ತಾಳಿಕೊಳ್ಳುವುದು. ಆದರೆ, ಇಂಥ ಹೊತ್ತಿನಲ್ಲಿ ಅವುಗಳೊಡನೆ ಮನಬಿಚ್ಚಿ ಮಾತನಾಡಿದರೆ ಆ ಎಲ್ಲ ನಾವು ನೋವುಗಳು ಬಯಲಾಗಿ ಅದರ ಹೃದಯ ಹಿರಿದಾಗುವುದು. ಹಿಗ್ಗು ಹೆಚ್ಚುವುದು. ಇಷ್ಟರಲಿ ಮತ್ತೊಂದು ಬಿರುಗಾಳಿ ಬರಲು ಅದೆಲ್ಲವನು ಕೊಚ್ಚಿಕೊಂಡು ಹೋಗುವುದು. ಹಿಂದಿನ ಅಳುವೆ ಅದರ ಸಂಪದವಾಗುವುದು. ಮತ್ತೆ ಮತ್ತೆ ಅಳುವುದು, ಗೋಳಿಡುವುದು. ಒಮ್ಮೊಮ್ಮೆ ಇರುಳೆಲ್ಲವನು ಅಳುವಿನಲಿ ಕಳೆಯುವುದು. ಹಲವು ಹಂಚಿಕೆಗಳನು ಹಾಕಿ ಆ ದಂಪತಿಗಳನು ತನ್ನ ಕಣ್ಣೆದಿರು ತಂದು, ಕಣ್ಣೀರಿನಿಂದ ಅವರ ಪಾದಗಳನು ತೊಳೆಯುವುದು. ನಿಮ್ಮ ಪ್ರೇಮದಾಶೆ ಮಾಡಿ ನಿಮ್ಮ ಹೃದಯ ಮಂದಿರದ ಈಶನನು ಪೂಜಿಸುವೆನು" ಎಂದು ಬೇಡಿಕೊಳ್ಳುವುದು. ಅದಕೆ ಬಿಸಿಯುತ್ತರವು ಬರಲು "ಪ್ರೇಮವು ಸುಖದ ನೆಲೆಯಾಗಿಹುದೆ? ಛಿ! ಸುರಲೋಕ ಸುಧೆಯಾಗಿಹುದೆ?? ಛಿ!! ಇದು ಸತ್ಯವಲ್ಲ. ಹಾಗಿರಲು ನಮಗೇಕೆ ಈ ಪರಿ ದುಃಖ?" ಎಂದು ಬಗೆಯುವುದು. "ಪ್ರೇಮ ಅಮೃತವಲ್ಲ, ಪ್ರೇಮ ಸಂಜೀವನವಲ್ಲ, ಪ್ರೇಮವು ಶಿವಕುಡಿದ ಹಾಲಾಹಲ ವಿಷವಾಗಿದೆ. ಬೆಂಕಿಯಾಗಿದೆ." ಎಂದು ಅಂದು ಕೊಳುವುದು. "ಎನ್ನ ತಾಯಿ! ಎನ್ನ ಅಣ್ಣಾ!! ಆ ಹಾಲಾಹಲ ವಿಷ ಪ್ರಜ್ವಲಿಸುವ ವಡವಾನಲವಾಗಿ ನನ್ನ ಹೃದಯವನ್ನು ಸುಡುತ್ತಲಿದೆ ಈಗ. ನಾನು ತಡೆಯಲಾರೆ ಬದುಕಲಾರೆ. ನಿಮ್ಮ ಪ್ರೇಮದೌಷಧಿಯನಿಕ್ಕಿ ನನ್ನ ಸಲುಹಿಕೊಳ್ಳಿರಿ"

ಎಂದು ಶೋಕಿಸುತ್ತ ಬಿದ್ದುಕೊಳ್ಳುವುದು. ಹೊರಳಾಡಿ ಗೋಳಿಡುವುದು.

ರೆಕ್ಕೆ ಕಳಚಿದ ಆ ಹಕ್ಕಿ ಒಂದು ದಿನ ಯಾವುದೋ ಒಂದಡವಿಯಲ್ಲಿ ಬಿದ್ದು ತನ್ನೆಡೆಗೆ ನೋಡದೆಲೆ ಮೇಲೆ ಹಾರುತಿರುವ ಆ ದಂಪತಿಗಳನು ಕಣ್ಣು ಬಿಟ್ಟು ನೋಡುತ್ತ ದುಃಖಾಶ್ರುಗಳನು ಒಂದೆ ಸಮನೆ ಧಾರೆಯಾಗಿ ಸುರಿಸಿ ಸಿಡಿದಾದ ಬಿಸಿಯುಸಿರನು ಎಳೆಯುತಿದೆ. ಅವುಗಳೊಡನೆ ಏನೋ ಮಾತಾಡಬಯಸಿ ಕಂಠ ಗದ್ಗದಿಸಲು ಕೆಳೆ ಮೋರೆ ಮಾಡಿ ನೆಲಕ್ಕುರುಳುತಿದೆ. ಬಿಕ್ಕಿ ಬಿಕ್ಕಿ ಅತ್ತು ತನ್ನ ದೈವವನು ಹಳಿಯುತ್ತಿದೆ. ಹೀಗೆ ಪ್ರೇಮ ವ್ಯಥೆಯಲ್ಲಿ ಮೂರ್ಛಿತವಾಗಿರಲು ಇದುರಿಗೊಂದು ಮಹಾಗಿರಿಯ ಕಡಿದಾದ ಪ್ರದೇಶವು ಕಂಗೊಳಿಸಿತು. ಏಕೆ ಏನೊ, ಅದನೇರುವಾಸೆ ಇವರ ಹೃದಯದಲ್ಲಿ ಹೆಚ್ಚಳಿಸಲು ಹಾಲುಂಡಿಯುಂತಿದ್ದ ಆ ರೆಕ್ಕೆಯಿಲ್ಲದ ಹಕ್ಕಿಯು ಮೆಲ್ಲಮೆಲ್ಲನೆ ಒಂದೊಂದೆ ಹೆಜ್ಜೆಯನ್ನಿಡುತ್ತ ಏರತೊಡಗಿತು. ಆದರೆ ಏತಕೊ ಏನೋ ಎಂಬುದನು ಅದು ಅರಿಯದು. ಏರತೊಡಗಿತು ಹಾಗೇ ಏರತೊಡಗಿತು. ಅಷ್ಟರಲಿ ಒಂದು ಶಕ್ತಿ, ಪ್ರಗಾಢವಾಗಿಹ ಶಕ್ತಿ ಅದರ ಜೀವದಾಳವನು ಹೊಕ್ಕು ಕೆಳಗಿನಿಂದ ಮೇಲೆ ಒತ್ತುತಲಿತ್ತು. ಆ ಹಕ್ಕಿ ತನ್ನನು ಯಾರು ಮೇಲಕ್ಕೆ ಒತ್ತುವರೆಂದು ಸುತ್ತಮುತ್ತ ನೋಡಲು ಕಣ್ಣರಳಿತು. ಅಷ್ಟರಲಿ "ಇಚ್ಛೆಯಿರುವಲಿ ಪೋಗು, ಇಚ್ಛೆಯಿರುವಲಿ ಪೋಗು" ಎಂದೊಂದು ಧ್ವನಿಯನ್ನು ಹೃದಯದಾಳದಿಂದ ಉಚ್ಚರಿಸಿ ಹದ್ದು ಹಾರಿಸಿದ ಹಾಗೆ ಆಗಸದಲ್ಲಿ ಅದನ್ನು ಹಾರಿಸಿಬಿಟ್ಟಿತು. ಆಗ ಮಿತಿಯಿಲ್ಲದಾನಂದ ಅದರ ಹೃದಯ ತುಂಬಿಕೊಂಡಿತು. ಹಿಗ್ಗಿ ಹಿರಿದಾಗಿ ಅದನ್ನು ತೇಲಾಡಿಸಿ ಓಲಾಡಿಸಿ ಬಿಟ್ಟಿತು. ಇಂತು ಆ ಹಕ್ಕಿ ತನ್ನಂತರಂಗದ ವಾಚಾಮಗೋಚರ ಆನಂದದಲ್ಲಿರಲು ಅನಿತರೊಳೆ ಅದರ ನಚ್ಚಿನ ಜೋಡು ಹಕ್ಕಿಗಳೆ [illegible]

ಮಂದ ಮುಹೂರ್ತದೊಳು ಆಗಸದಲ್ಲಿ ಮೈದಾಳಿದ ಮಹಾ ಮಂತ್ರವಿದು :—

*" ಮೂರು ಜೀವಗಳು ಮುಗಿಲ ತಲದಲಿ ಕೂಡಿ
ಹೃದಯಗಳನೆಲ್ಲವನು ಸಾಮರಸ್ಯವ ಮಾಡಿ
ತಮ್ಮ ತಮ್ಮಯ ಆತ್ಮದರವನ್ನು ಅರಿತಲ್ಲಿ
ಆಗಲೇ ಹುಟ್ಟುವುದು ನವನವ್ಯ ಜೀವನವು"



---

* " If three people are together under the skies and the soul is conscious between them, that is civilisation "

"*A. E*"

*

# ಕಳೆದ ಮುತ್ತು

ಗಂಗಮ್ಮನು ಅವಳೊಂದು ಮುತ್ತಿನಂಥಾ ಹೆಣ್ಣು! ಅವಳ ಗೋಳು, ಸಾಯುವಾಗ ಹೊಂದಿದ ಅವಳ ಸಂಕಟದ ಪರಿ, ಎಲ್ಲಾ ನೆನಿಸಿಕೊಂಡರೆ ಆ ಚಿತ್ರವು ಕಣ್ಣೆದಿರಿಗೆ ಈಗಲೂ ಕಟ್ಟಿಬಿಡುವುದು. ನಾನೆಷ್ಟೋ ಸಾರೆ ಅವಳತ್ತೆ ಇಲ್ಲದಾಗ ಸಿದ್ಧರಾಮನ ದೆಶೆಯಿಂದ ಅವರ ಮನೆಗೆ ಹೋಗುತ್ತಿದ್ದೆ. ಆಗ ನನ್ನನ್ನವಳು ಕರೆದು ಕೂಡ್ರಿಸಿಕೊಂಡು ತನ್ನೆಲ್ಲಾ ಸಂಗತಿಯನ್ನು ತೋಡಿಕೊಳ್ಳುತ್ತಿದ್ದಳು. ಸಿದ್ಧರಾಮನಿಗೆ ಇದರ ಬಗ್ಗೆ ಎಷ್ಟೋಸಾರೆ ಹೇಳಿದ್ದೂ ಉಂಟು. ಆದರೇನು? ಅವಳ ತಾಯಿಯೊಬ್ಬಾಕೆ ಇದ್ದಾಳಲ್ಲ! ನಿಂಬೆವ್ವ!! ಅವಳ ಕೈಯ್ಯಲ್ಲಿ ಗೊಂಬೇ ಈತ. ಅವಳ ಒಂದೂ ಮಾತು ಮೀರುವಂತಿಲ್ಲ.

ಒಂದು ಪ್ರಸಂಗ ನೋಡಿರಿ:—ಸುಮಾರು ಒಂಬತ್ತು ಗಂಟೆ ರಾತ್ರಿಯಾಗಿರಬಹುದು. ಒಂದು ಕೋಣೆಯಲ್ಲಿ ರೋಗಗ್ರಸ್ತಳಾದ ಆ ಹೆಣ್ಣು ಮಗಳು ಮಲಗಿದ್ದಾಳೆ. ಅವಳ ಸ್ಥಿತಿ ನಿರಾಶಾಜನಕವೆಂದು ಕಂಡರೂ ಹತ್ತಿರದಲ್ಲಿ ಕುಳಿತು ಅವಳ ಗತಿಯನ್ನು ವಿಚಾರಿಸಿ ಸಂತೈಸುವವರಾರೂ ಇಲ್ಲ. ಅವಳ ನರಳುವ ಧ್ವನಿಯೊಂದಿಗೆ, ಎಳೆಯುವ ಉಸಿರೊಂದಿಗೆ ಅವಳ ಜೇನೆಯ ತಾಪದೊಡನೆ ಹೃದಯದ ಸಂತಾಪವೂ ಒಡೆದು ಕಾಣುತ್ತಿತ್ತು. ಉರುಟಾದ ಆಕೆಯ ಹಾಸಿಗೆಯ ಮುಳ್ಳುವೇದನೆಯು ಒಳಗಿನ ತಾಪಕ್ಕೆ ಪೂರಕವೇ ಆಗಿತ್ತೆನ್ನಬಹುದು. ಸಾಮಾನುಗಳಿಂದ ತುಂಬಿದ ಆ ಸಣ್ಣದಾದ ಕೋಣೆಯಲ್ಲಿ ಒಂದು ದೀವಿಗೆಯು ಮಾತ್ರ ಹತ್ತರದಲ್ಲಿ ಕುಳಿತು ಯಾವ ಭವಿಷ್ಯ

ವನ್ನು ಹೇಳಲು ಧ್ಯಾನಮಾಡುತ್ತಿತ್ತೊ ಯಾರಿಗೆ ಗೊತ್ತು.? ತನ್ನ ಕುರುಡಾದ ಕಣ್ಣುಗಳನ್ನು ಒಮ್ಮೊಮ್ಮೆ ಮುಚ್ಚುತ್ತಲೂ ತೆರೆಯುತ್ತಲೂ ಯಾರನ್ನು ಕೋಪಿಸಿಯೋ ಏನೋ ಕಪ್ಪಾದ ಹೊಗೆಯನ್ನು ಒಂದೇ ಸಮನೇ ಕಾರುತ್ತಾ ನಿಂತಿತ್ತು.

ಆಕೆಯ ವಯಸ್ಸೇನು ಮುಪ್ಪೆನುಪಿರಾ? ಇಲ್ಲ. ತುಂಬಾ ಪ್ರಾಯ. ಹದಿನೆಂಟು ವರುಷವೆಂದರೆ ಒಹಳವೆನ್ನಿರಿ. ವಯಸ್ಸಿಗೆ ತಕ್ಕಂತೆ ಚೆಲುವೆಯೂ ಹೌದು. ಆಕೆಯ ಬಣ್ಣ ಅಷ್ಟೇನೂ ಬಿಳುಪವಲ್ಲ, ಸ್ವಲ್ಪ ನಸುಗೆಂಪು; ಸೀಳವಾದ ಮೂಗು; ತುಂಬಿದ ಗಲ್ಲ; ಅದಕ್ಕೆ ತಕ್ಕ ಹಣೆ. ಆ ಹಣೆಯಮೇಲೆ ಹರಿದಾಡುವ ಮುಂಗುರುಳು. ಹೊಳೆಯುವ ಅಗಲವಾದ ಕಣ್ಣುಗಳು. ಒಟ್ಟಿನ ಮೇಲೆ ಅವಳ ಮುಖ ಒಳ್ಳೇ ಲಸಲಸ! ಇಂಥ ಮುಖವುಳ್ಳ ಮುದ್ದಿನ ಗೌರಿಯನ್ನು ಅವಳ ಪ್ರೀತಿಯವರಾರಾದರೂ ಈಗ ನೋಡಿದರೆ ನಿಶ್ಚಯವಾಗಿಯೂ ಎದೆಯೊಡಕೊಳ್ಳದೆ ಇರಲಾರರು. ಬೇನೆಯ ಬೆಂಕಿ ಮತ್ತು ಹೃದಯದ ಕಿಚ್ಚುಗಳಲ್ಲಿ ಕಲ್ಲುಗಳೂ ಕೂಡ ಬೆಂದು ಹೋಗುತ್ತಿರುವಲ್ಲಿ ಇಂಥ ಕೋಮಲೆಯಾದ ಒಬ್ಬ ಅನಾಥ ಬಾಲೆಯು ಸುಟ್ಟು ಸುಣ್ಣಾಗಿ, ಬಾಡಿ ಬೆಂದಿರುವುದರಲ್ಲಿ ಏನು ಆಶ್ಚರ್ಯವಿದೆ?

ಅರ್ಧ ಮುಚ್ಚಿಕೊಂಡ ದೊಡ್ಡದಾದ ಕಣ್ಣುಗಳನ್ನು ಭಾರವಾಗಿ ಹೊತ್ತುಕೊಂಡು ಮೇಲೆ ನೋಡುತ್ತಿದ್ದಾಳೆ. ಒಮ್ಮೊಮ್ಮೆ ಕಣ್ಣನ್ನು ತುಂಬಾ ಅರಳಿಸಿ, ಸುತ್ತೆಲ್ಲ ನೋಡಿ, ದೊಡ್ಡದೊಂದು ಉಸಿರನ್ನು ಹಾಕಿ ಮಗ್ಗುಲಾಗಿ ಹೊರಳುವಳು. ತಾಪವು ಹೆಚ್ಚಿದಾಗ ಮತ್ತೆ ಹೊರಳಿ "ಅಯ್ಯೋ ನೀರು! ಅತ್ತೆಯವರೇ ನೀರು!!" ಎಂದು ಒದರುವಳು. ಹೀಗೆ ನಾಲ್ಕಾರು ಸಾರೆ ಹಲುಬಿದರೂ ಮರುದನಿ ಬಾರದಿರಲು ಮತ್ತು ಒಮ್ಮೆ ಹೊರಳಿ "ಅಯ್ಯೋ ಶಿವನೆ! ಎಂಥಾ ಪಾಳೆ ತಂದಿ" ಎಂದೆಂದು ಬುಸುಬುಗರೆಯುವಳು. ಕಣ್ಣೀರಿಡುವಳು.

ಒಮ್ಮೊಮ್ಮೆ, ಒಮ್ಮೆಲೆ ಹೊರಗೆ ಗದ್ದರಣೆ ಸುರುವಾದಂತಾಗುವುದು. ಪಾಪ! ಹಾಸಿಗೆಯಲ್ಲಿ ಹೊರಳಾಡುವ ಗಂಗಮ್ಮ ತನ್ನ ಮೇಲೆಲ್ಲಾದರೂ ಸಿಡಿಲು ಕಡಿದು ಬೀಳುವುದೋ ಎಂದು ಗಾಬರಿಯಾಗುವಳು. ಅದು ನಿಜವಾಗಿಯೂ ಮುಗಿಲಲ್ಲಿ ಗದ್ದರಿಸುವ ಗದ್ದರಣೆಯಲ್ಲ. ಅವಳಲ್ಲಿ ಲಿಂಬೆವ್ವನ ಬಾಯಿ ಗದ್ದರಣೆಯೆಂಬುದು ಅವಳು ತನ್ನ ಬೇನೆಯ ವೇದನೆಯಲ್ಲಿ ಮರೆಯುತ್ತಿದ್ದಳು. ಈಗ ನಾಲ್ಕಾರುಸಾರೆ "ನೀರು! ನೀರು!!" ಎಂದು ಗಂಗವ್ವ ಹಲುಬಿದಾಗ ಒಮ್ಮೆಲೆ ಗುಡುಗು ಗುಡುಗುಡಿಸಹತ್ತಿತು. "ನೀಯಾಕ ಸತ್ತಿಯೇ ಸೋಗಲಾಡಿ! ನೀಯಾಕ ಸತ್ತಿ!! ನೀರ್ಕುಡಿದು ಇನ್ನೂ ಜೀಂವಾ ಹಿಡಿಬೇಕಂತಿ?" ಎಂದು ಅನ್ನುತ್ತ ಲಿಂಬೆವ್ವ ರೌದ್ರಾವತಾರವನ್ನು ತಾಳಿ ಎರಡು ಸಿಂಪಿ ನೀರುಳ್ಳ ಒಂದು ದೊಡ್ಡ ತಂಬಿಗೆಯನ್ನು ತಂದು ಗಂಗವ್ವನ ಕೈಗೆ ನಿಲುಕದ ಸ್ಥಳದಲ್ಲಿ ಧಪ್ಪನೆ ಇಕ್ಕರಿಸಿ ಹೊರಟುಹೋದಳು. ನಿಜವಾಗಿಯೂ ಸಿಡಿಲು ಬಡೆದಿದ್ದರೆ ಗಂಗವ್ವನಿಗೆ ಪಾಸಿಯಾಗುತ್ತಿತ್ತೊ ಏನೋ! ಇವಳ ಮಾತು ಸಿಡಿಲಿಗಿಂತ ಹೆಚ್ಚು ವೇದನೆ ಮಾಡದೆ ಇರಲಿಲ್ಲ. "ಸಿಡಿಲು ಬೀಳುತ್ತವೆ; ಆದರೆ ಪ್ರಾಣತೆಗೆದುಕೊಂಡು ಹೋಗುವ ಸಿಡಲು ಬೀಳಲೊಲ್ಲವಲ್ಲ! ಜೀವನ್ನಿಟ್ಟು ಗೋಳಿಡಿಸುವ ಸಿಡಿಲು ಬೀಳುತ್ತಿವೆಯಲ್ಲಾ!!" ಎಂದು ಕಂಬನಿಗೆರೆವಳು. "ಸಿಡಿಲು ಬಿದ್ದರೂ ಬೀಳಲಿ ಈ ನನ್ನ ತಪ್ತಹೃದಯವನ್ನು ಸಂತವಿಸಲು ತಂಪು ನೀರಾದರೂ ಸಿಕ್ಕಿತಲ್ಲಾ!" ಎಂದು ಅಂದುಕೊಂಡು ನೀರಿಗಾಗಿ ಕೈಚಾಚುವಷ್ಟರಲ್ಲಿ ಲಿಂಬೆವ್ವನ ಸ್ವಾರಿಯು ಯಾವ ಕೆಲಸಕ್ಕೋ ಏನೋ ಬೈಗಳ ಮಳೆಯನ್ನು ಸುರಿಸುತ್ತಾ ಮತ್ತೆ ಒಳಗೆ ಬಂದಿತು. ಆಗ ಗಂಗವ್ವ "ಅತ್ತೆಯವರೇ ನನ್ನ ಬೇನೆನೆಟ್ಟಗಾದಮೇಲೆ ನೀವೆಷ್ಟು ಕಾಡಬೇಕಾಗಿದೆಯೋ ಕಾಡಿರಿ. ನಾನೀಗ ಬೇನೆಯವಳು. ನಿನ್ನ ಮಗಳ ಸರಿ ನಾನು. ನನ್ನನ್ನು ಕಾಪಾಡಿರಿ. ನಾನು ಮಾಡಿದ ತಪ್ಪಾದರೂ ಏನು ನನಗಿಷ್ಟು ಕಾಡಲಿಕ್ಕೆ? ಇಗೋ ನೋಡಿರಿ, ನಿಮ್ಮ ಕಾಲು

ಬೀಳುತ್ತೇನೆ. ಪರದೇಶಿ ಮಗಳು ನಾನು!'' ಎಂದು ಮಲಗಿದಲ್ಲಿಯೇ ಕಾಲುಬೀಳುವಳು. "ಅವ್ವವ್ವಾ! ನಿನಸೋಗೆಲ್ಲಾ ನಾ ಬಲ್ಲೆ! ಕಾಲ್ಬಿಳ್ತಾಳ ಕಾಲ, ಕಾಲ್ಬಿದ್ರ-ಅತ್ರ-ನಾ ಬಿಡಿತೀನಂತ ತಿಳದೀದೇನು? ನಿನ್ನ ಹೆಣಾ ಗ್ವಾಡೀಗಿ ಕೂಡಿಸ್ತೀನಿ. ನನ್ನ ಮಗಳಾಕ್ತಾಳಂತ ಮಗಳು! ಹೊಲ್ಯಾರ ಮಗಳಾಗು, ಹೊಲ್ಯಾರ ಮಗಳು! ನಿಮ್ಮವ್ವಾ, ನಮ್ಮಕಾಕಾನ ಮಗಳ ಮಗಳೀಗಿ ಕಾಡ್ಯಾಳ ಹೊಯ್ಕಲ್ಲಿ! ನಿನಗಿನ್ನಾ ಭೂತಾಗಿ ಬೆನ್ನಹತ್ತೀನಿ, ಭೂತಾಗಿ! ಏನಂತ ತಿಳದಿ?'' ಎಂದು ಲಿಂಬೆಮ್ಮಾ ಗುಡುಗು ಹಾಕುತ್ತ ಹೊರಗೆ ಹೋಗುವಳು. ಆಗ ಗಂಗಮ್ಮನು "ನಮ್ಮ ತಾಯಿ, ನಿಮ್ಮ ಕಕ್ಕನ ಮಗಳ ಮಗಳೀಗಿ ಕಾಡಿದರೆ ನನ್ನ ತಪ್ಪೆ? ದೇವರೇ ಏನು ನ್ಯಾಯವಿದು?'' ಎಂದು ಅಳುವಳು. ನಿತ್ರಾಣವಾದ ಕೈಗಳನ್ನು ಚಾಚಿ ಹಬ್ಬುಹಾಕಿ ತಂಬಿಗೆಯನ್ನು ತೆಗೆದುಕೊಳ್ಳುವಾಗ ಅದು ಜಾರಿಬಿದ್ದು ಇದ್ದಬಿದ್ದ ಒಂದೆರಡು ಸಿಂಪಿ ನೀರೂ ಚೆಲ್ಲಿ ಹೋಯಿತು. ಮತ್ತೆ "ಆಯ್ಯೋ'' ಅಂದಳು. "ಇನ್ನಾರಿಗೆ ಕೇಳುವುದು?'' ಅಂದಳು. ಈ ನೀರನ್ನು ಸಂಗ್ರಹಿಸಲು ಏಸು ಸಿಡಲಿನ ಏಟನ್ನು ತಡೆಯಬೇಕಾಯಿತೊ, ಮತ್ತೆ ಬೇಡಿದರೆ ಇನ್ನೇಸು ಸಿಡಿಲು ಬಡಿಸಿಕೊಳ್ಳಬೇಕಾಗುವುದೋ! ದೇವರೆ! ಪ್ರಾಣವನ್ನಾದರೂ ಬೇಗನೆ ಎಳೆದೊಯ್ಯಬಾರದೆ? ಎಂದು ಗೋಳಾಡಿದಳು.

ಇತ್ತ ಸಿದ್ಧರಾಮನಾದರೂ ಏನು ಕೆಟ್ಟವನೆ? ಆತನೂ ಒಳ್ಳೇ ಯುವಕ. ಅದರಂತೆ ಚಲುವನೂ ಹೌದು. ವಿದ್ಯೆ ಬುದ್ಧಿಗಳೂ ಉಂಟು. ತಕ್ಕಷ್ಟು ಶರೀರ ಸಂಪತ್ತನ್ನೂ ಸಂಪಾದಿಸಿದ್ದಾನೆ. ಗಂಗಮ್ಮನೊಡನೆ ಆತನ ಪ್ರೀತಿ ಮೊದಲಿನಿಂದಲೂ ಹೆಚ್ಚು. ಆದರೆ ಅದು ಗೌಪ್ಯ. ಪರದೇಶಿಯಾದ ಗಂಗಮ್ಮ ಸಿದ್ಧರಾಮನ ಸೋದರತ್ತೆಯ ಮಗಳು. ತಾಯಿ ಸತ್ತೊಡನೆ ಆಕೆಯನ್ನು ಇಲ್ಲೇ ಕರೆದು ಕೊಂಡು ಬಂದಳು. ಸಿದ್ಧರಾಮನ ಅಜ್ಜಿ-ಗಂಗವ್ವನ ತಾಯಿ "ಸಿದ್ಧರಾಮನಿಗೇ ಗಂಗೆಯನ್ನು ಕೊಡಿರಿ'' ಎಂದು ಸಾಯುವಾಗ

ಹೇಳಿ ಸತ್ತಿದ್ದಳಂತೆ. ಮದುವೆಯಾಗದಿದ್ದರೂ "ಗಂಗೆ-ಸಿದ್ಧರಾಮರು ಗಂಡ-ಹೆಂಡರು" ಎಂದು ಅನ್ನುತ್ತಿದ್ದರು ಅವರ ಮನೆಯವರು. ತಿಳುವಳಿಕೆ ಬಂದ ಮೇಲೆ ಅದು ಆ ಭಾವೀ ದಂಪತಿಗಳಿಗೆ ನಾಚಿಕೆಯನ್ನುಂಟುಮಾಡದೆ ಹೇಗೆ ಬಿಟ್ಟೀತು? ಆದ್ದರಿಂದ ಬಹಿರಂಗವಾಗಿ ಮಾತಾಡುವ ಸಾಹಸವನ್ನು ಅವರೆಂದೂ ಮಾಡಲಿಲ್ಲವೆಂದೇ ಹೇಳಬೇಕು. ಒಂದೆರಡು ಸಾರೆ ಗಂಗಮ್ಮನೇ ಗಟ್ಟಿ ಜೀವ ಮಾಡಿ, ಯಾರು ಇಲ್ಲದಾಗ ತನ್ನ ಬಗೆಯಮಾತನ್ನು ಬಿಚ್ಚಿ ಹೇಳಿಕೊಂಡದ್ದುಂಟಂತೆ. ಆಯ್ತು ಮುಂದೆ ಅಜ್ಜಿ ಸತ್ತಮೇಲೆ ಲಿಂಬೆಮ್ಮನ ಕೈಯಲ್ಲಿ ಅಧಿಕಾರಬಂತು. ಅದಕ್ಕೆ ಸರಿಯಾಗಿ ಗಂಗಮ್ಮನ ದುರ್ದೈವದ ಕಾಲವೂ ಬಂತೆನ್ನಬೇಕು. ಲಿಂಬೆಮ್ಮ, ಗಂಗಮ್ಮನನ್ನು ಮನವಾರೆ ಕಾಡಹತ್ತಿದಳು. ಗಂಗಮ್ಮ ಮೈನೆರದು ಆರು ವರುಷಗಳಾಗಿದ್ದರೂ ಹೃದಯದ ಮಾತಂತೂಬಿಡಲಿ, ಸಿದ್ಧರಾಮನೊಡನೆ ಸುಮ್ಮನೆ ಮಾತಾಡುವ ಪ್ರಸಂಗ ಬಂದಿದೆಯೋ ಇಲ್ಲವೋ ಹೇಳಲಾರೆ. ಹಗಲು ಹೊತ್ತಂತೂ ಅವರ ಭೆಟ್ಟಿಯು ಸಂಭವವೇ ಇದ್ದಿಲ್ಲ. ರಾತ್ರಿ, ಅವರು ಏಕಾಂತದಲ್ಲಿದ್ದಾಗ್ಗೆ ನಾಲ್ಕು ನಾಲ್ಕು ತಾಸು. ಲಿಂಬೆಮ್ಮ ಬಾಗಿಲಲ್ಲಿ ಸೂರು (ಸುಳಿವು) ಹಿಡಿದು ನಿಲ್ಲುವಳು. ಅವರು ಏನೋ ಮಾತಾಡುತ್ತಿದ್ದಾರೆ ಎಂದು ಅವಳಿಗೆ ಅನಿಸಿದರೆ ಆಗಲೇ ಗದರಿಸುವಳು. "ಯಾಕೆ ಎಲಗೇ? ಏನು ಮಾತಾಡುತ್ತ ಇದ್ದಿಯೇ?" ಎನ್ನುವಳು. ಅಷ್ಟರಿಂದಲೇ ಗಂಗಮ್ಮನ ಎದೆಯೊಡದು ನೀರಾಗುವುದು. ಬಾಯಿಗೆ ಮಾತೂ ಕೂಡ ಬರುತ್ತಿರಲಿಲ್ಲ! ಸಿದ್ಧರಾಮನದೂ ಅದೇಗತಿ! ಹೀಗಿರುವುದರಿಂದ ಬಳಲುವ ತನ್ನ ಹೆಂಡತಿಯ ಶುಶ್ರೂಷೆ ಮಾಡಲು ಆತನು ಕಳ್ಳನಾಗಿ ಕುಳಿತನು.

ಆಯ್ತು, ಈಗ ನೀರಿಲ್ಲದೆ ಕಸವಿಸಿಯಾಗುತ್ತ ಗಂಗಮ್ಮ ಬಿದ್ದಿದ್ದಾಳೆ. "ಸಾಯುವ ಕಾಲಕ್ಕೆ ಗಂಡನ ಮೋರೆಯನ್ನಾದರೂ ನೋಡಲಾರನೇ ನಾನು! ಅವರ ಕೂಡ ಒಂದೆರಡು ಮಾತನ್ನೂ ಆಡಲಾರೆನೆ!! ಇಷ್ಟು ನನ್ನ ದೈವವು ಕೆಟ್ಟದ್ದೆ??" ಎಂದೆಂದು ಶೋಕಿಸು

ವಳು. ಆತನನ್ನು ನೆನಿಸಿ ನೆನಿಸಿ ಅಳುವಳು. ಆತನ ರೂಪನ್ನು ತನ್ನ ಕಣ್ಣೆದಿರಿಗೆ ತರುವಳು. "ದೇವರೇ! ನಮ್ಮತ್ತೆಯವರಿಗೆ ಬುದ್ಧಿಯನ್ನೇಕೆ ಕೊಡಬಾರದು? ಮನಸ್ಸನ್ನೇಕೆ ತಿರುಗಿಸಬಾರದು?? ನನ್ನನ್ನವರು ಪ್ರೀತಿಸುವಂತೇಕೆ ಮಾಡಬಾರದು???" ಎಂದು ದೇವರನ್ನು ಬೇಡಿಕೊಳ್ಳುವಳು. ಮತ್ತೆ "ಈ ನನ್ನ ಪ್ರಾರ್ಥನೆಯು ದೇವರಿಗೆ ಕೇಳಿಸುವುದೇ? ನನ್ನ ಪ್ರಾಣಾಂತ್ಯದ ಕಾಲಕ್ಕಾದರೂ ಬಂದು ನನ್ನನವರು ಭೆಟ್ಟಿಯಾಗುವಂತೆ ಆತನು ಮಾಡುವನೆ?? ದೇವಾ! ಹಾಗೆ ಮಾಡು. ಇದೊಂದು ನನ್ನ ಕೆಲಸವನ್ನು ಮಾಡು. ಕಡೆಗೊಮ್ಮೆ ಅವರನ್ನು ಕಣ್ಣುತುಂಬಾ ನೋಡಿ ನನ್ನ ಪ್ರಾಣ ಬಿಡುವೆನು." ಎಂದೆನ್ನುವಷ್ಟರಲ್ಲಿಯೇ ಬಾಗಿಲು ಧಡಕ್ಕೆಂದಿತು. ಒಮ್ಮೆಲೆ ಗಂಗಮ್ಮ ಬೆಚ್ಚಿ ಬಿದ್ದಳು! ಅತ್ತೆಯವರು ಮತ್ತೆ ಬಂದರೋ ಏನೋ ಎಂದುಕೊಂಡಳು. ಅಲ್ಲ ಯಾರೋ ಗಂಡಸರು! ಆಕೆಯ ಆರಾಧ್ಯದೇವನಾದ ಸಿದ್ಧರಾಮನು! ಆಗ ಆಕೆಯ ಹಿಗ್ಗು ಹೇಳಲಾಸಲ್ಲ. ಅವಳ ದುಃಖವೆಲ್ಲಾ ಆಗ ಯಾವ ಪಾತಾಳಕ್ಕಡಗಿ ಹೋಯಿತೋ ಯಾರು ಬಲ್ಲರು? ಇಷ್ಟು ಬಾಡಿ ಬೆಂದಿದ್ದರೂ ಕೂಡ ಗಂಗಮ್ಮನ ಕಮಲ ಮುಖ ಇವರನ್ನು ನೋಡಿ ಹೀಗೆ ಸ್ವಲ್ಪ ಅರಳಿತು. "ಬಂದಿರಾ? ಕಡೆಗೊಮ್ಮೆ ಈ ಪಾಪಿಗೆ ನಿಮ್ಮ ದರ್ಶನ ಕೊಟ್ಟು ಪುನೀತಳನ್ನಾಗಿ ಮಾಡಿದಿರಾ?? ಹೃದಯವನ್ನು ಶಾಂತಗೊಳಿಸಿದಿರಾ???" ಎಂದೆನ್ನುತ್ತ ಕಣ್ಣೀರನ್ನು ಸುರಿಸಿದಳು. "ಯಾಕೆ ಗಂಗಾ! ಯಾಕೆ ಅಳುತ್ತಿ? ನಿನ್ನನ್ನು ನಾನು ಪ್ರೀತಿ ಮಾಡುವುದಿಲ್ಲವೆಂದು ತಿಳಿದಿರುವಿಯಾ? ನಿಜವಾಗಿಯೂ ನಿನ್ನಮೇಲೆ ನನ್ನ ಪ್ರೀತಿಯಿದೆ. ಆದರೆ ......................ಬೇರೆ ಏನೂ ಭಾವಿಸಬೇಡ ನೋಡು ಗಂಗಾ! ಎಂದು ಸಿದ್ಧರಾಮನು ಅವಳ ಕೈಯನ್ನು ತನ್ನ ಕೈಯಲ್ಲಿರಿಸಿಕೊಂಡು ಅನ್ನುವನು.—"ನಾನೇನೂ ನಿಮ್ಮ ಮೇಲೆ ಮುನಿದಿಲ್ಲ. ಭಾವಿಸಿಲ್ಲ. ನಾವಿಬ್ಬರು ಗಂಡಹೆಂಡರು ಪ್ರೇಮದಿಂದ ಮಾತಾಡುವುದು, ಕಲೆಯುವುದು, ನಮ್ಮ ದೈವದಲ್ಲಿಯೇ ದೇವರು ಬರೆದಿಲ್ಲ. ಬಿಡಲಿ. ಗುಪ್ತವಾಗಿಯೇ ಇರಲೊಲ್ಲದೇಕೆ, ನಿಮ್ಮ ಪ್ರೇಮ ನನ್ನ ಮೇಲೆ

ಇದ್ದರೆ ಸಾಕು. ಆದರೆ ನಾನು ಈಗ ಜಡ್ಡಿನವಳು. ಸಾಯುವ ಸ್ಥಿತಿಯಲ್ಲಿದ್ದೇನೆ. ಯಾರ ಮೋರೆ ನೋಡಿ ಹೊತ್ತುಗಳೆಯಲಿ? ನನಗಾರು ದಿಕ್ಕು?? ನೀರಡಿಸಿದಾಗ ಒಂದು ಗುಟುಕು ನೀರನ್ನಾದರೂ ಯಾರು ಕೊಡುವರು? ಅತ್ತೆಯವರು ನಿಮಗೆ ಮತ್ತೊಂದು ಒಳ್ಳೆಯ ಹೆಣ್ಣು ತಂದು ಲಗ್ನ ಮಾಡುತ್ತೇನೆನ್ನುವರು. ನಿಮಗೆ ಇನ್ನೊಂದು ಲಗ್ನಮಾಡಲಿ ನಾನೇನೂ ಬೇಡವೆನ್ನುವುದಿಲ್ಲ. ನನಗೆ ಸಂತೋಷವೇ ಇದೆ. ನಿಮಗೆ ತಕ್ಕವಳು ನಾನೊಬ್ಬಳೇ ಹೆಂಡತಿ ಎಂದು ನಾನಂದು ಕೊಳ್ಳುವುದಿಲ್ಲ. ನಿಮಗನುರೂಪವಾದ ಹೆಣ್ಣು ಈ ಮನೆಗೆ ಬಂದು ನಿಮ್ಮ ಕೂಡ ಸಂತೋಷದಿಂದ ನಕ್ಕು ನಲಿದು ಬಾಳ್ವೆ ಮಾಡಿದರೆ ನನಗೆಷ್ಟೋ ಹಿಗ್ಗು. 'ನನ್ನಂಥ ದುರ್ದೈವಿಯನ್ನು ಕೈಹಿಡಿದು ನೀವು ಸುಖವನ್ನುಅನುಭವಿಸಲಿಲ್ಲವಲ್ಲಾ!'ಎಂದು ನನಗೊಂದು ದುಃಖವಿದೆ. ನೀವು ಮದುವೆ ಮಾಡಿಕೊಂಡಿದ್ದಾದರೆ ಅದೊಂದು ನನ್ನ ಹೊರೆ ಇಳಿದಂತಾಗುತ್ತದೆ. ಆದರೆ ನಾನು ಸಾಯುವವರೆಗೆ ನನಗೆ ನಿಮ್ಮ ಮುಖವನ್ನು ತೋರಿಸುತ್ತಿರಿ. ಅತ್ತೆಯವರು ನೀರು ಹಾಕದೆ ಬಿಡಲಿ, ಅನ್ನ ಹಾಕದೆ ಬಿಡಲಿ, ನಿಮ್ಮ ಮುಖವನ್ನು ನೋಡಿದರೆ ಅನ್ನನೀರುಗಳಿಗಿಂತ ನನಗೆ ಹೆಚ್ಚು ತೃಪ್ತಿಯಾಗುತ್ತದೆ. ನನಗೀ ಜಡ್ಡು ಸುರುವಾದಾಗ ನೀವು ಮೊದಮೊದಲು, ಊಟಕ್ಕೆ ಬಂದ ಹೊತ್ತಿನಲ್ಲಿ ಇದೇ ಕೋಣೆಯಲ್ಲಿ ಅಂಗಿ ಕೋಟುಗಳನ್ನು ತೆಗೆದಿಟ್ಟು ಹೋಗುತ್ತಿದ್ದಿರಿ. ಆಗ ನಿಮ್ಮ ಮುಖ ನೋಡುತ್ತಿದ್ದೆ. ಆ ಆನಂದದಲ್ಲಿ ನನ್ನ ಸರ್ವ ದುಃಖಗಳನ್ನೂ ಸಹಿಸಿಕೊಂಡು ಇರುತ್ತಿದ್ದೆ. ಯಾವ ಕಾರಣದಿಂದೋ ಏನೋ ಮುಂದೆ ಇಲ್ಲಿ ಬರುವುದನ್ನು ನೀವು ನಿಲ್ಲಿಸಿದಿರಿ. ಆಗಿನಿಂದ ನನಗಾಗುವ ತಾಪ ಎಷ್ಟೆಂದು ಹೇಳಲಿ? ..................." ಎಂದು ಬಿಕ್ಕಿ ಬಿಕ್ಕಿ ಅಳುತ್ತ ಇನ್ನೂ ಏನೇನೋ ಹೇಳಿದಳು.

ಸುದೈವದಿಂದ ಲಿಂಬೆವ್ವನಿಗೆ ಆಗ ನಿದ್ರೆಹತ್ತಿತ್ತು! ಈದಿನ ಸಿದ್ಧರಾಮನು ತಾಯಿಯ ಕಟ್ಟನ್ನು ಹರಿದು ಹೆಂಡತಿಯೊಡನೆ

ಮಾತಾಡ ಬಂದಿದ್ದನು. ಆದ್ದರಿಂದ ಅವರು ಅಂಜದೆ ಮನದ ಮಾತನ್ನೆಲ್ಲ ಬಿಚ್ಚಿ ಬಿಚ್ಚಿ ಆಡಿಕೊಂಡರು. ನಿಜವಾಗಿಯೂ ಈರಾತ್ರಿ ಗಂಗಮ್ಮನಿಗೆ ದೇವಲೋಕದ ಹಬ್ಬವಾದಂತಾಗಿರಬೇಕು. ಆಯ್ತು, ಅದೇ ಹಿಗ್ಗಿನಲ್ಲಿಯೇ ಇಹಲೋಕದ ಯಾತ್ರೆಯನ್ನು ಮುಗಿಸಿ ಅವಳು ಹೊರಟುಹೋದಳು.

ಗಂಗಮ್ಮನ ಸಾವಿನ ದಾರಿಯನ್ನೇ ಕಾಯುತ್ತಿದ್ದ ಲಿಂಬೆಮ್ಮ ಒಡನೆಯೇ ಒಂದು ಹೆಣ್ಣು ತಂದು ಮಗನ ಲಗ್ನಮಾಡಿದಳು. ಈಗ ಬಂದಾಕೆ ಬಲು ಮಾಟಗಾರ್ತಿ! ಗಂಡನನ್ನೂ ಅತ್ತೆಯನ್ನೂ ಕರಡಿ ಕುಣಿಸಿದ ಹಾಗೆ ಕುಣಿಸುತ್ತಲಿದ್ದಾಳೆ! ಅದಕ್ಕೀಗ ಇವರಿಗೆ ಬೇನೆ ಯಾಗಿದೆ. ಆಗಲಿ,ಮಾಡಿದ ಆ ಪಾಪಕ್ಕೆ ಪಶ್ಚಾತ್ತಾಪ ಪಡಬೇಕಲ್ಲವೆ?

ಮೊನ್ನೆ ನನ್ನದೊಂದು ಕೆಲಸಕ್ಕಾಗಿ ಸಿದ್ಧರಾಮನ ಮನೆಗೆ ಹೋಗಿದ್ದೆ. ಆತನ ಕೊಠಡಿಯ ಕದ ಮುಂದಕ್ಕೆ ಮಾಡಿತ್ತು. ಮೊದಲು ಒಂದೆರಡು ಸಾರೆ ಆತನಿಗೆ ಒದರಿದೆ. ಓ ದೊರೆಯಲೇ ಇಲ್ಲ. ಬಾಗಿಲ ತಟ್ಟಿದೆ. ಒಳಗೆ ನೋಡಲು ಆತನು ಒಂದು ಖುರ್ಚಿಯ ಮೇಲೆ ಕುಳಿತು, ಬಲಗೈಯನ್ನು ಮೇಜಿನ ಮೇಲೆ ಚಾಚಿ, ತನ್ನ ಗೋಣನ್ನು ಆದರ ಮೇಲೆ ಒರಗಿಸಿ ಬಾಗಿಲ ಕಡೆ ಬೆನ್ನು ಮಾಡಿ ಮಲಗಿಕೊಂಡಿದ್ದನು. ಬಿರಬಿರನೆ ಒಳಗೆ ಹೋಗಿ ಆತನ ಬೆನ್ನು ಹಿಂದೆ ನಿಂತೆ. ಹೀಗೆ ಹಬ್ಬುಹಾಕಿ ನೋಡಿದೆ. ಮುಖ ಬಾಡಿದೆ. ಒಂದೇ ಸಮನೆ ಕಣ್ಣೀರು ಹರಿಯುತ್ತಲಿದೆ. ನಡನಡುವೆ ಸಣ್ಣ ಉಸಿರುಗಳನ್ನು ಹಾಕುತ್ತಲಿದ್ದನು. ಆಗ ನನಗೆ ಥಟ್ಟನೆ ಹೊಳೆದು ಬಿಟ್ಟಿತು. ಅಯ್ಯೋ ಪಾಪ! ಸತ್ತುಹೋದ ಹೆಂಡತಿ ಗಂಗಮ್ಮನ ನೆನಪು ಆಗಿರಬೇಕು. ಅಳುತ್ತಲಿದ್ದಾನೆ.'' ಎಂದೆ. ಅದು ನಿಜವೂ ಇತ್ತು. ಯಾಕೆಂದರೆ ಆತನ ಮೆತ್ತೊಂದು ಕೈಯೆಡೆಗೆ ನನ್ನ ದೃಷ್ಟಿ ಹೋದಾಗ ಅವಳ ತಸಬೀರನ್ನೂ ಕಂಡೆ. ಆದರೇನು ? ಸತ್ತಮೇಲೆ ಎಷ್ಟು ಅತ್ತರೇನು ? ಇದ್ದಾಗ ಅವಳನ್ನು ಸಂತೈಸಲಿಲ್ಲ. ಮಾತಾಡಿಸಲೂ

ಇಲ್ಲ. ತಾಯಿಯ ಮಾತನ್ನು ಕೇಳಿ ಗೋಳಾಡಿಸಿ ಬಿಟ್ಟನು. ಈಗ ನೆನೆನೆನಸಿಕೊಂಡು ಅತ್ತರೆ ಏನು ಫಲ ?

ಆತನ ಹಿಂಬದಿಗೆ ನಾನು ಎಷ್ಟೋ ಹೊತ್ತು ನಿಂತೇ ನಿಂತೆ. ಅಳುತ್ತ ಒರಗಿದ ಸಿದ್ಧರಾಮನು ನನ್ನ ಕಡೆ ನೋಡಲೇ ಇಲ್ಲ. ಕಡೆಗೆ ಆತನನ್ನು ತಟ್ಟಿ "ಸಿದ್ಧರಾಮಾ ! ಏಕೆ ? ಹೀಗೇಕೆ ??" ಎಂದೆ. ಆಗ ಆತನು ಕಣ್ಣೊರಿಸಿಕೊಳ್ಳುತ್ತ "ಬಾ! ಕೂಡ್ರು ಬಾ!!" ಎಂದು ಒಂದು ಆಸನವನ್ನು ಜಗ್ಗಿದನು. "ಇರಲಿ ಬಿಡು ನೀನು ಹೀಗೇಕೆ ಅಳುತ್ತಿರುವಿ ? " ಎಂದು ನಾನು ಮತ್ತೆ ಅಂದೆ. "ಇಲ್ಲ. ಏನೂ ಇಲ್ಲ." ಎಂದು ಎಷ್ಟು ಅಂದರೂ ನಾನು ಜುಲುಮೆ ಮಾಡಿದ್ದರಿಂದ ಮುನ್ನಾದಿನ ಕನಸಿನಲ್ಲಿಕಂಡ ಗಂಗವ್ವನ ಸಂಗತಿಯನ್ನೂ, ಅವಳು ಆಗ ಹೇಳಿದ ಮಾತುಗಳನ್ನೂ, ಅಲ್ಲಿ ತೋರಿದ ಅವಳ ಪ್ರೇಮನನ್ನೂ ಸಂಪೂರ್ಣವಾಗಿ ಹೇಳಿ "ನಾನೆಂಥ ದೊಡ್ಡ ತಪ್ಪು ಮಾಡಿದೆ! ಎಂಥ ಮೂರ್ಖ ನಾನು !! ತಾಯಿಯ ತಿಳಿಗೇಡಿತನದ ಮಾತುಕೇಳಿ ನಿರಪರಾಧಿಯಾದ ಆ ಸರಳ ಸ್ವಭಾವದ ಮುಗ್ಧೆಯನ್ನು ಎಷ್ಟು ಗೋಳಾಡಿಸಿದೆನು !!! ಎಷ್ಟು ಹಿಂಸಿಸಿದೆನು !!!! ಪ್ರೇಮಯಾಚನೆ ಮಾಡುತ್ತಿದ್ದ ಆಭಿಕ್ಷುಣಿಗೆ ಬಹಿರಂಗವಾಗಿ ಪ್ರೇಮದ ಒಂದು ತುತ್ತನ್ನೂ ಇಕ್ಕಲಿಲ್ಲವಲ್ಲಾ ! ತಾಯಿಯ ಮಾತು ಕೇಳದೆ ಎಲ್ಲಿಯಾದರೂ ಡಾಕ್ಟರರಿಂದ ಔಷಧ ಕೊಡಿಸಿದ್ದರೆ ಆ ನನ್ನ ನಚ್ಚಿನ ಸತಿ ಉಳಿಯುತ್ತಿದ್ದಳೋ ಏನೊ ! ಹಾಗೆ ಮಾಡಿದ್ದೆನಾಗಿದ್ದರೆ ನನ್ನ ಬಾಳುವೆಯು ಎಷ್ಟು ಸುಖಮಯವಾಗುತ್ತಿತ್ತಲ್ಲ ! ಕೆಟ್ಟೆ ಕೆಟ್ಟೆ ಸರ್ವಥಾ ಕೆಟ್ಟೆ. ಇದರಿಂದುಂಟಾದ ನನ್ನ ಹೃದಯವೇದನೆಯು ಈ ಜನ್ಮದಲ್ಲಿಯೇ ಇಲ್ಲ. ಇನ್ನು ಏನು ಜನ್ಮ ಸಹಿಸಿಕೊಂಡರೂ ನಿವಾರಣೆ ಯಾಗದು." ಎಂದು ಹೇಳುತ್ತ ಕಣ್ಣೀರು ಸುರಿಸುವಷ್ಟರಲ್ಲಿಯೇ " ಅಯ್ಯೋ ದೇವರೇ ! ಎಂಥ ಸೊಸೆ ಹೋಗಿ ಎಂಥವಳು ಬಂದಳು ! ಎಂಥಾ ಪಾಪಿ ನಾನು !! ಅರಗಿಣಿ ! ನನ್ನ ಮುದ್ದಿನ ಗೌರಿಯನ್ನು ಕಳೆದುಕೊಂಡೆ !! ಅವಳಿಗೆಷ್ಟು ಗೋಳಿಡಿಸಿದೆ !!! ಅಂಥಾ ಸೊಸೆಯು ಏಳೇಳು ಜನ್ಮ

ಪುಣ್ಯ ಮಾಡಿದರೂ ಸಿಗಲಾರಳಯ್ಯೋ! ನಾನೆಂಥಾ ಪಾಪಮಾಡಿದೆ !! ಇವಳೆಂಥಾಕೆ ಬಂದಳು !!!" ಎಂದು ಹಾಡಿ ಹಾಡಿ ಅಳುತ್ತಿರುವಷ್ಟ ರಲ್ಲಿಯೇ ಏರುಧ್ವನಿಯಲ್ಲಿ ರಭಸದಿಂದ "ಹೌದೆ ! ಹೌದು !! ನಿನ್ನ ಕೈಯಾಗ ಊಳಗಾಗಿ, ಬೈಸಗೊಂತಾ ಕೆಲಸಾಮಾಡಲಿಕ್ಕೆ ನಾನೇನು ಗಂಗಮ್ಮ ಅಂತಾ ತಿಳಿದಿದಿಯಾ ? " ಎಂದು ತಾಟವನ್ನು ಬಲವಾಗಿ ನೆಲಕ್ಕೆ ಇಕ್ಕರಿಸಿದಳು. ಆಗ ಕೆಳಗೆ ಮೋರೆ ಮಾಡಿ ಹೆಬ್ಬೆರಳಿನಿಂದ ನೆಲವನ್ನು ಬರೆಯುತ್ತಿದ್ದ ಸಿದ್ಧರಾಮನು ತಾಯಿಗಾದ ಈ ಮಂಗಳಾ ರತಿಯನ್ನು ಕಂಡು ಒಳಗೊಳಗೇ ನಕ್ಕನು !



# ಹಕ್ಕಿಯ ಹಾಡು

**ಸೂ**ರ್ಯನು ಈಗತಾನೆ ಪೂರ್ವಾಚಲವನ್ನು ಹತ್ತುತ್ತಿದ್ದಾನೆ. ಆತನ ಸುವರ್ಣ ಕಿರಣಗಳು ಮುಗಿಲಿಗೆ ಹಾರಿ, ಮೋಡಗಳನ್ನು ಮುತ್ತಿ ಭೂಮಿಯೆಡೆಗೆ ಸಾಗುತ್ತಲಿವೆ. ಇಷ್ಟೇ ಅಲ್ಲ, ಕವಿಗಳ ಮತ್ತು ರಸಿಕರ ಕಾವ್ಯರಸವನ್ನು ಪ್ರವಹಿಸಲೆಂದು ಮೂಲೆ ಮೂಲೆಗಳ ಲ್ಲಿಯೂ ಅವರನ್ನು ಹುಡುಕುತ್ತಲಿವೆ. ಹಾವಾಗಿ ಹರಿದ ಗಂಗೆಯು ಸಂಗೀತವನ್ನು ಹಾಡುತ್ತ ನಲಿಯುತ್ತಿರುವುದು ಆ ಸಮಯಕ್ಕೆ ಮತ್ತಷ್ಟೂ ಒಪ್ಪೆನ್ನಬೇಕು. ಹಕ್ಕಿಗಳೆಲ್ಲ ತಮ್ಮ ಹೊಸದಿನದ ಹಾಡನ್ನು ಹಾಡುತ್ತಿರುವುದು. ಅದೆಷ್ಟು ಸೊಬಗೋ ನಾನು ಹೇಳಲಾರೆ.

ಅಷ್ಟು ಹೊತ್ತಿಗೆ ನಾನು ತುಂಗೆಯನ್ನು ಸಂದರ್ಶಿಸಿ ಮಾಧವ ಮುನಿಗಳ ಮುರುಕು ದೇಗುಲದ ಮುಂದೆ ಹಾಯ್ದು ಕಣ್ಣು ಬಿಡುತ್ತ ಕಲ್ಲಾಗಿ ಕುಳಿತ ಆತನಿಗೆ ನಮಿಸಿ ವಿರೂಪಾಕ್ಷ ದೇವರ ಗುಡಿಗೆ ಬಂದೆ. ಅಲ್ಲಿಯ ಗೋಪುರವನ್ನು ಕತ್ತೆತ್ತಿ ನೋಡಿ, ಕಣ್ಣೇರಿಟ್ಟು, ಹೇಮ ಕೂಟ ಪರ್ವತದ ಮಗ್ಗುಲಲ್ಲಿ ಹಾದು ಹೊರಟೆ ನನ್ನ ಮಾರ್ಗ ಹಿಡಿದು.

ಒಮ್ಮೆಲೆ ನನ್ನ ದೃಷ್ಟಿಯು, ಒಣಗಿ ಮುರುಲಾಗಿ ಕೊಂಬೆ ಗಳನ್ನಷ್ಟೇ ಚಾಚಿಕೊಂಡು ಬಟ್ಟ ಬತ್ತಲೆಯಾಗಿ ನಿಂತ ಒಂದು ಗಿಡದ ಕಡೆಗೆ ಹೋಯಿತು. ಅದರ ಒಂಕುಡೊಂಕಾದ ಕೊಂಬೆಗಳು, ಖತಿಗೊಂಡ ಮನುಷ್ಯನು "ಈ ಜಗತ್ತಿನಲ್ಲಿ ಏನಿದೆ?" ಎಂದು ಕೇಳು ವಾಗ ಮಾಡಿದ ಆತನ ಕೈಬೆರಳುಗಳೋ ಏನೋ ಎನ್ನುವಂತೆ ಎನಗೆ

ಎನಿಸಿತು. ಒಣಗಿ ಕೊರಡಾಗಿನಿಂತ ಆ ಗಿಡದ ಒಂದು ಶುಷ್ಕ ಶಾಖೆಯ ಮೇಲೆ ನಿಸ್ಸಾರತೆಯಲ್ಲಿ ಸಾರತ್ವವು ಪ್ರಸವಿಸುವಂತೆ ಎರಡು ಹಕ್ಕಿಗಳು, ಅತಿ ಚಲುವಾದ ಹಕ್ಕಿಗಳು, ತಮ್ಮ ಪಕ್ಕಗಳನ್ನು ಕುಕ್ಕಿಕೊಳ್ಳುತ್ತ ಕುಳಿತುಕೊಂಡಿವೆ. ನೇಸರನು ಎಸೆಯುವ ಬಂಗಾರದ ಬೆತ್ತುಗಳನ್ನು ಎಣಿಸುವವೋ ಎನ್ನುವಂತೆ ಅವು ಮೇಲೆ ಕೆಳಗೆ ಕತ್ತನ್ನು ಹೊರಳಿಸಿ, ಕಣ್ಣನ್ನು ಅರಳಿಸುತ್ತಿಹವು.

ಹೊರಟವನು ಗಕ್ಕನೆ ನಿಂತುಬಿಟ್ಟೆ. ಆ ದಂಪತಿಗಳ ಸೆರೆಯಲ್ಲಿ ನನ್ನ ಮನವು ಕೂಡಲೆ ಬಿದ್ದುಬಿಟ್ಟಿತು. ಅವು ಒಂದರೊಂದರ ಪಕ್ಕದಲ್ಲಿ ಜೋಡಿಯಾಗಿ ನಿಲ್ಲುವುದೂ, ಕತ್ತಿನಮೇಲೆ ಕತ್ತನ್ನು ಹೇರಿ ಒರಗುವುದೂ, ಬಾಯಿಯಲ್ಲಿ ಬಾಯಿ ಹಾಕುವುದೂ, ತಮ್ಮ ನೀಳವಾದ ಗೋಣನ್ನು ತೂಗಲಾಡಿಸುವುದೂ ಅಲ್ಲದೆ::ಒಮ್ಮೆಲೆ ಸರಿದು ಮೋರೆ ತಿರುವಿ ನಿಲ್ಲುವುದೂ ಇದೆಲ್ಲಾ ಆ ದಂಪತಿಗಳ ಪ್ರಣಯ ಲೀಲೆಯೆನಿಸಿತು. ಆನಲ್ಲನು, ಆ ಮುಗ್ಧೆಯ ಮುಂದೆ ಎದೆಯುಬ್ಬಿಸಿ, ಗೋಣನೆತ್ತಿ, ಕಣ್ಣು ಕೆರಳಿಸಿ ಹೇಳುತ್ತಿರುವ ಮಾತುಗಳು ಅವನ ಪೌರುಷದ ಮಾತುಗಳಿರಬೇಕೆನಿಸಿತು. ತನ್ನ ನಲ್ಲನ ಪೌರುಷಕ್ಕೆ ಮೆಚ್ಚಿ ಅಭಿಮಾನಗೊಂಡು ಪ್ರೇಮದಿಂದ ಆತನನ್ನವಳು ಅಪ್ಪಿಕೊಳ್ಳುವಳೊ ಎನಿಸಿತು. ಅಲ್ಲದೆ ನಲ್ಲೆಯ ಪ್ರೇಮಕ್ಕೆ ನಲ್ಲನ ಪ್ರೇಮವೂ ಉಕ್ಕೇರಿ ಅವಳನ್ನು ಚುಂಬಿಸಿ ಚುಂಬಿಸಿ ಆಲಿಂಗಿಸುತ್ತಿದ್ದಾನೆ; ಇಷ್ಟೇ ಅಲ್ಲ ಪ್ರೇಮ ಕಲಹಗಳು, ಮುನಿಸು ಸಿಡುಕುಗಳು, ವಾದ ವಿವಾದಗಳು, ಅಲ್ಲದೆ ಇನ್ನೂ ಎಷ್ಟೆಷ್ಟೋ ಭಾವಪೂರಿತ ಪ್ರಸಂಗಗಳು ನಡೆಯುತ್ತಿರುವವು ಎನಿಸಿತು. ಗಂಡು ಹಕ್ಕಿಯು ಮುನಿದು ಮೋರೆ ತಿರುವಿನಿಂತಾಗ ಅಂಗಲಾಚಿ-ಬೇಡುವಂತೆ ಸಾರಿ ಬರುತಿರುವ ಹೆಣ್ಣು ಹಕ್ಕಿಯನ್ನು ನೋಡಿದರೆ;—

ಹಾಸಿದ್ಹಾಸಿಗಿ ಬಿಟ್ಟು ಹಾದೀಗಿ ಮಲಗ್ಯಾರ ।  
ಸೂಸಗಾಳೀಗಿ ಬಳಕ್ಯಾರ ರಾಯರಿಗಿ ।  
ಏಸು ಬಾರಿಕಾಲ ಹಿಡಿಯಾಲಿ ॥

ಎಂಬ ಗರತಿಯ ಹಾಡು ನೆನಪಿಗೆ ಬಾರದಿರಲಿಲ್ಲ. ಇದಲ್ಲದೆ ಮುಕ್ತ ಸೃಷ್ಟಿಯ ನಿರ್ಜರರಾಗಿ, ನನ್ನ ಕಲ್ಪನೆಗೆ ಮೀರಿ ಅದಾವ ಮಹ ಲನ್ನು ಅವು ಕಟ್ಟುತ್ತಿದ್ದವೋ ಅದಾರು ಬಲ್ಲರು !

ಒಲ್ಲೆನಿಸಿದರೂ ನನ್ನ ಹೆಜ್ಜೆಗಳನ್ನು ಕಿತ್ತಿ ಕಿತ್ತಿ ಇಡುತ್ತ ಹೊರಟೆ ಮುಂದೆ ನನ್ನ ದೃಷ್ಟಿ ಮಾತ್ರ ಆಗಿಡದ ಕಡೆ; ಆ ಗಿಡ ದಲ್ಲಿ ಕುಳಿತ ದಂಪತಿಗಳ ಕಡೆ. ಏಕೋ ಏನೋ ಗಂಡು ಹಕ್ಕಿಯು ಒಮ್ಮೆಲೆ ಹಾರಿತು. ಒಡನೆಯೇ ಹೆಣ್ಣು ಹಕ್ಕಿಯೂ ಉಡ್ಡಾಣವನ್ನ ಕೊಟ್ಟಿತು. ಹೀಗೆ ಒಂದು ಫೇರಿಯನ್ನು ಹೊಡೆದು, ಲಾಗ ಒಗೆದು, ನನ್ನ ಮುಂದೆ ಮೇಲೆ ಹಾರಿ ಬರುತ್ತಿದ್ದವು. ಪಾಪ! ಅವಕೇನು ಗೊತ್ತು ಮುಂದಿನ ಆಗು ಹೋಗು ? ಕಾಲನ ದವಡೆಯಲ್ಲಿ ತಾವಿರು ವೆವೆಂಬುದು ಯಾರರಿತಿದ್ದಾರೆ ಈ ಲೋಕದಲ್ಲಿ? ಸುಖದ ಕೊನೆ ದುಃಖದ ಮೂಲವೆಂಬುದನ್ನು ಯಾರು ತಿಳಿದಿದ್ದಾರೆ? ಇಷ್ಟು ಮಾತ್ರ ಸತ್ಯ, ಅವು ಕೇಕೆಹಾಕುವುದರ ಉದ್ದೇಶವು "ನಾವು ಸುಖದ ಸಾಗರ ದಲ್ಲಿ ಈಜುವೆವಲ್ಲಾ!" ಎಂದು ಹರುಷಗೊಂಡು.

ಆಯ್ತು ಕಾಲ ಸಂದಿಸಿತು ಯಮನ ಕೊನೆಯ ಗಂಟೆ ಬಡಿ ಯಿತೋ ಏನೋ! ಒಂದು ಗಿಡಗ ಎಲ್ಲಿಂದಲೋ ಹಾರಿ ಬಂದು ಗಂಡು ಹಕ್ಕಿಯನ್ನು ಕಚ್ಚಿಕೊಂಡು ಹೋಯಿತು. ಹೆಣ್ಣು ಹಕ್ಕಿ ಗಾಬರಿಯಾಗಿ, ತಕ್ಕವಿಕ್ಕಿಯಾಗಿ, ಉಬ್ಬಸಬಿಡುತ್ತ ಸುತ್ತಲೂ ನೋಡಿತು. ಅಯ್ಯೋ ಪಾಪ ಆ ಹೆಣ್ಣು ಹಕ್ಕಿಗೆ ಎಂಥ ಕಾಳ ಕರಾ ಳವಾಗಿ ತೋರಿರಬೇಕು. ಆಗಿಡಗ! ಆಯ್ತಾ ಸುತ್ತಿ ಸುತ್ತಿ ಬಂತು. ಹಲುಬೇ ಹಲುಬಿತು. ಚೀರಿತು. ಗೋಳಿಟ್ಟಿತು. ಗಿಡದಿಂದ ಗಿಡಕ್ಕೆ ಹಾರಿತು. ಕಂಟಿಯಿಂದ ಕಂಟಿಗೆ, ಕಲ್ಲಿನಿಂದ ಕಲ್ಲಿಗೆ ಹಾರಿ ಹಾರಿ ಗೋಳಿಟ್ಟಿತು. ಆಗಿನ ಅದರ ಹೊಟ್ಟೆಯ ಉರಿ ವಡವಾನ ಲಕ್ಕಿಂತ ಹೆಚ್ಚು ಪ್ರಖರವಾಗಿ ಪ್ರಜ್ವಲಿಸಿರಬೇಕು !!

ಅದರ ಸಂಕಟಕ್ಕೆ ನನ್ನ ಹೃದಯವೂ ಮರುಗದೆ ಇರಲಿಲ್ಲ. ಇಂಥ ಸಂಕಟಕ್ಕೆ ಮರುಗದ ಒಂದು ಕಲ್ಲೂ ಕೂಡ ಈ ಜಗದಲ್ಲಿ

ಇಲ್ಲವೆಂದೇ ನನ್ನ ಭಾವನೆ. ಮರುಗಿದೆ ಒಳಿತಾ ಮರುಗಿದೆ. ತನ್ನ ನಲ್ಲನನ್ನು ಕಳೆದುಕೊಂಡು ಬಳಲುವ ಆ ನಲ್ಲೆಯಷ್ಟು ಮರುಗಿರದಿದ್ದರೂ ಮರುಗುವವರನ್ನು ನೋಡಿ ಮರುಗಬೇಕಾದಷ್ಟನ್ನು ಮಾತ್ರ ಸಂಪೂರ್ಣ ಮರುಗಿದೆ.

ಆ ಹೆಣ್ಣು ಹಕ್ಕಿ ಹಲಬುತ್ತ ಎಲ್ಲಿ ಹೋಯಿತೊ ಹೋಯಿತು. ನಾನು ನನ್ನ ಹಾದಿಯನ್ನು ಹಿಡಿದು ನಡೆದಿದ್ದರೂ ಆ ಹಕ್ಕಿಗಳ ಸಂಪೂರ್ಣ ಚಿತ್ರ ನನ್ನ ಕಣ್ಣೆದಿರು. ಅದೆಷ್ಟೋ ಭಾವನೆಗಳ ತಾಕಲಾಟ ನಡೆಯಿತು ನನ್ನ ಮನದಲ್ಲಿ.

ಸೀತೆಯನ್ನು ಕಳೆದುಕೊಂಡ ಶ್ರೀರಾಮನು ಗಿಡಗಂಟೆಗಳೆದುರು ಗೋಳಿಟ್ಟಂತೆ ಈ ಹಕ್ಕಿಯೂ ಕೂಡ "ನನ್ನ ಗಂಡನ ಕರತನ್ನಿರೆ! ಕೂಡಿಸಿರೆ!! ತೋರಿಸಿರೆ!!!" ಎಂದು ಗೋಳಿಟ್ಟಿರಬೇಕಲ್ಲವೆ? "ದುಷ್ಟರ ಮಧ್ಯದಲ್ಲಿ ಒಬ್ಬೊಂಟಿಯಾಗಿ ಮಾನದಿಂದ ಹೇಗೆ ಬಾಳಲಿ?" ಎಂದು ಕಣ್ಣೀರಿಟ್ಟಿರಬಹುದಲ್ಲವೆ? ಹೀಗೆ ಇನ್ನೂ ಏನೇನೋ ಭಾವಿಸೇ ಭಾವಿಸಿದೆ. ಕಳವಳವು ಹೆಚ್ಚಾಗಿ ಹಿಂತಿರಿಗಿ ನಿಂತೆ. "ತಾಯಿ! ನಿನ್ನ ದುಃಖಕ್ಕೆ ನಾನೂ ಭಾಗಿಯಾಗಿರುವೆ ನಮ್ಮಾ!" ಎಂದು ಉಸುರುಗರೆದೆ. ಆ ಉಸಿರನ್ನು ಗಾಳಿಯಲ್ಲಿ ಹಾಗೇ ತೇಲಿಬಿಟ್ಟೆ. ಮೇಲೆ ಮೋರೆ ಮಾಡಿ ಸುಖಪುರುಷಾ! ನಿನ್ನ ಆತ್ಮಕ್ಕೆ ಶಾಂತಿ ದೊರೆಯಲಿ ಶಾಂತಿ ದೊರೆಯಲಿ! ಎಂದು ಉಕ್ಕಿ ಬರುವ ಕಣ್ಣೀರನ್ನು ಅವಳ ಇನಿಯನಿಗೆ ಅರ್ಪಿಸಿದೆ. ಮತ್ತೊಂದು ಉಸಿರನ್ನು ಹಾಕಿ ಕಿತ್ತದ ಹೆಜ್ಜೆಯನ್ನು ಎಳೆ ಎಳೆಯುತ್ತಾ ಮನದಲ್ಲಿ ಮಿಡುಕಿ ಹೊರಟೆ ನನ್ನ ಹಾದಿಹಿಡಿದು.



# ಪಾವನೆ

**ಕ**ಮಲೆಯ ತಾಯಿಗೆ ಅವಳೇ ಹಿರಿಯ ಮಗಳು. ಆಕೆಗೀಗ ಸುಮಾರು ಹದಿನೈದು ವರುಷ. ಆಕೆಯನ್ನು ಬಿಟ್ಟು ಅವಳ ತಾಯಿಗೆ ಇನ್ನೊಬ್ಬ ಮಗಳೂ ಇರುವಳು. ಕಮಲೆಗೆ ವಯಸ್ಸಾದ್ದರಿಂದ ಆಕೆಯಲ್ಲಿ ಪ್ರಾಯವೂ ಈಗ ಅಡಿಯಿಟ್ಟಿತ್ತಲ್ಲದೆ ರಂಗ ಮಂಟಪವನ್ನು ರಚಿಸಿರಲಿಲ್ಲ. ನಯವಾದ ತುಟಿ, ಹೊಳೆಯುವ ಕಣ್ಣು, ಮಿರುಗುವ ಗಲ್ಲಗಳನ್ನು ನೋಡಿದರೆ ಒಂದೊಂದಾಗಿ ಹೆಜ್ಜೆಗಳನ್ನಿಡುತ್ತ ಪ್ರಾಯವು ಬರುತ್ತಿದೆ ಎನಿಸುವುದು. ಅದಕ್ಕಾಗಿಯೇ ಅವಳ ಕಕ್ಕನು ಅವಳ ಓದು ಬರಹ ನಿಲ್ಲಿಸಿದ್ದನು. ಶಾಲೆಯನ್ನು ಬಿಡಿಸಿದ್ದರೂ ಆಕೆ ಚೆನಾಗಿ ಓದಬಲ್ಲಳು. ಬರೆಯಲೂ ಬಲ್ಲಳು. ಆದುದರಿಂದ ಇಷ್ಟೊತ್ತಿಗೆ ಎಷ್ಟೋ ಪುಸ್ತಕಗಳನ್ನು ಓದಿ ಮನನ ಮಾಡಿದ್ದಳು. ರೂಪ, ಗುಣ ಮತ್ತು ವಿದ್ಯೆಗಳೊಡನೆ ಸಂಗೀತವೂ ಒಂದು ಒಪ್ಪಾಗಿ ಅವಳಲ್ಲಿ ಮಿರುಗುವುದರಿಂದ ಮನೆಯವರಂತೆ ಹೊರಗಿನವರೂ ಅವಳನ್ನು ಪ್ರೀತಿಸುತ್ತಿದ್ದರು. ರಾಮಾಯಣವನ್ನೂ ಭಾರತವನ್ನೂ ಪಿಯಾನೋದಲ್ಲಿ ಸುಂದರವಾಗಿ ಹಾಡಿ ತೋರಿಸುತ್ತಿದ್ದಳಾದ್ದರಿಂದ ಆ ಊರಿನಲ್ಲಿಯೇ ಏಕೆ ಸುತ್ತಲಿನ ಊರ ಸುಶಿಕ್ಷಿತರ ಮನೆಗಳಲ್ಲಿಯೂ ಅವಳ ಖ್ಯಾತಿ. ತಾಯಂದಿರು ತಮ್ಮ ಹುಡಿಗಿಯರಿಗೆ ಬುದ್ಧೀ ಹೇಳುವಾಗ 'ಮಾಸ್ತರ ಕಮಲೀನ ನೋಡಿ ನಾಚಬಾರದೆ' ಎಂದನ್ನುತ್ತಿದ್ದರಂತೆ. ಅದನ್ನೆಷ್ಟೋ ಸಾರೆ ಅವಳು ಕೇಳಿ ಒಳಗೊಳಗೆ ಹಿಗ್ಗಿದ್ದೂ ಉಂಟು. ಅಂತೂ ಅವಳ ರೂಪ, ಗುಣ, ಸ್ವಭಾವಗಳ ಬಗ್ಗೆ ಎಲ್ಲರಿಗೂ ಮೆಚ್ಚುಗೆ.

ಅವಳ ವಯಸ್ಸಾಗಿದ್ದರೂ ಲಗ್ನ ಮಾಡದಿದ್ದ ಕಕ್ಕನ ಉದ್ದೇಶ ಏನಿದ್ದೀತೋ ಅವಳಿಗೇನು ಗೊತ್ತು? ಪಾಪ! ಅವನೇನೋ "ಕಮ

ಲೆಗೆ ಒಳ್ಳೇ ವರನನ್ನು ನೋಡಿ ಕೊಡುತ್ತೇನೆ.'' ಎಂದೆನ್ನುತ್ತಿದ್ದನಂತೆ. ತನ್ನ ಕಕ್ಕನ ಮೇಲೆ ಭಕ್ತಿ ವಿಶ್ವಾಸಗಳನ್ನಿಟ್ಟ ಆಕೆ ಅವನು ಹೇಳುವ ಮಾತು ಸತ್ಯವೆಂದು ನಂಬಿ ಒಳ್ಳೇ ವರನನ್ನು ಆಶಿಸಿ ಹಾದಿ ಕಾಯುತ್ತಿದ್ದಳು. "ದುಡ್ಡಿನ ಲೋಭಿಯಾದ ಕಕ್ಕನು ಹಣಕ್ಕಾಗಿ ಹೆಣಗಳನ್ನು ಹುಡುಕುತ್ತಿರಲಿಲ್ಲವಷ್ಟೆ?" ಎಂದು ಅವಳೂ ಒಮ್ಮೆಯೂ ಭಾವಿಸಲಿಲ್ಲ. ಅಂತೂ ಎಷ್ಟೋ ದಿನ ಕಳೆದ ಮೇಲೆ ಒಂದು ದುರ್ದಿನ ಬಂತು. ತನ್ನ ದೈವದ ಮೇಲೆ ಕಲ್ಲು ಬೀಳುವ ದಿನ ಇದೇ ಎಂದು ಆಕೆಗೆ ಏನು ಗೊತ್ತು? ಮುಂಜಾನೆ ಸುಮಾರು ಎಂಟು ಘಂಟೆಯಾಗಿರಬಹುದು. ಆಕೆಯು ಕಾಯಪಲ್ಲೆಗಳನ್ನು ಸೋಸುತ್ತ ಕುಳಿತಿದ್ದಳು. ಅಷ್ಟರಲ್ಲಿ ಕಕ್ಕನು ಬಿರಬಿರನೆ ಹೊರಗಿನಿಂದ ಬಂದು "ಏನಮ್ಮಾ ಕಮಲೆ! ಸಾಲೆಯ ಸಾಹೇಬರು ಬಂದಿದ್ದಾರೆ. ಇಲ್ಲೇ ಊಟಕ್ಕೆ ಬರುವರು. ಬೇಗ ಅಡುಗೆಯಾಗಬೇಕು ನೋಡು!!" ಎಂದು ಹೇಳಿದವನೆ ತಿರುಗಿ ಹೋಗಿಬಿಟ್ಟನು. ಆ ದಿನ ಆಕೆಯ ತಾಯಿಯು ಹೊರಗಾದ್ದರಿಂದ ಅಂದಿನ ಅಡುಗೆಯ ಸಿದ್ಧತೆಯನ್ನು ಇವಳೇ ಮಾಡಬೇಕಾಯಿತು.

ಸಾಹೇಬರೊಡನೆ ಕಮಲೆಯ ಕಕ್ಕನೂ ಊಟಕ್ಕೆ ಕುಳಿತನು. ಅನ್ನ, ಸಾರು, ಪಲ್ಲೆ ಎಲ್ಲಾ ಮಡಿಯಿಂದಲೇ ಬಡಿಸಿದಳು. ಲಿಂಬೀಹೋಳು ಮೊದಲಾದ ಏನಾದರೂ ಸಾಮಾನು ಬೇಕಾದರೆ "ಕಮಲಾ ಅದು ತಾರವ್ವ! ಕಮಲಾ ಇದು ತಾರವ್ವಾ!!" ಎಂದು ನಡುನಡುವೆ ಕಕ್ಕ ತರಿಸಿಕೊಳ್ಳುತ್ತಿದ್ದನು. ಕಮಲೆ ಸ್ವಾಭಾವಿಕವಾಗಿಯೇ ಸುಂದರಿ. ಅದರಮೇಲೆ ವಯಸ್ಸಿನ ಒಪ್ಪೊಂದು. ಆದುದರಿಂದ ಊಟಕ್ಕೆ ಕುಳಿತ ಸಾಹೇಬರು ಅವಳನ್ನು ನೋಡಿ ಬೆರಗಾದರು. ಅವನು ನೋಡಿದ ನೋಟ, ಅವನಲಿದ್ದ ಆಗಿನ ಭಾವ, ಅದನ್ನೆಲ್ಲಾ ಆ ಮುಗ್ಧೆ ಆಗ ಏನು ಬಲ್ಲಳು? ಅಂತೂ ಆ ದುಷ್ಟ ಸಾಹೇಬನ ಮನದಲ್ಲಿ ಈಕೆಯ ಸೌಂದರ್ಯದ ಮುಳ್ಳು ಮುರಿದಿದ್ದರಿಂದ ಕಾಮ ಮದವು ಮೈಯಲ್ಲೆಲ್ಲಾ ವ್ಯಾಪಿಸಿಕೊಂಡಿತು. ಕಮಲೆಯ ತಾಯಿ ಆಗ ಹೊರಗಿದ್ದುದರಿಂದ ಇದೆಲ್ಲ ಅವಳಿಗೆ ಗೊತ್ತಾಗದೆ ಹೋಯಿತು.

ಮತ್ತೆ ಸಂಜೆಗೆ ಸಾಹೇಬರು ಇಲ್ಲೀ ಊಟಕ್ಕೆ ಬರಬಹು ದೆಂದು ತಿಳಿದುಕೊಂಡು ಅಡುಗೆಯನ್ನು ಮಾಡಿ ಎಲೆ ಹಾಕಿ ಸಿದ್ಧ ಳಾಗಿದ್ದಳು. ರಾತ್ರಿ ಎಂಟು ಘಂಟೆಯಾಯಿತು; ಒಂಬತ್ತಾಯಿತು; ಇನ್ನೂ ಬರಲೇ ಇಲ್ಲ. ಅವರು ಹಾದೀ ನೋಡಿ ನೋಡಿ ಬೇಸತ್ತರು. ಕಡೆಗೆ ಕಮಲೆಗೆ ನಿದ್ರೆಬಂದದ್ದರಿಂದ ಊಟಮಾಡಿ ಹಾಸಿಗೆ ಹಾಸುವ ವರಲ್ಲಿದ್ದಳು. ಅಷ್ಟರಲ್ಲಿ ಬಾಗಿಲು ಧಡಕ್ಕೆಂದಿತು. ದೀಪಿಗೆ ಹಿಡಿದು ನೋಡಿದರು. ಕಕ್ಕ ಒಬ್ಬನೇ ಬಂದನು. ಬಂದವನೇ "ಏನವ್ವಾ! ಇಲ್ಲಿಗೆ ಸಾಹೇಬರು ಬರುವುದಿಲ್ಲ. ಅಲ್ಲೇ ಊಟಮಾಡುತ್ತೇನೆಂದರು. ಆದುದರಿಂದ ಇಲ್ಲಿಂದಲೇ ಎಡೆ ಒಯ್ಯಬೇಕು. ಎಡೆ ಮಾಡಿಕ್ಕೊಂಡು ಕಮಲೆಯು ಬಂದರೆ ಅವಳನ್ನು ಕರೆದುಕೊಂಡು ನಾನೇ ಕೊಟ್ಟು ಬರುತ್ತೇನೆ" ಎಂದು ಕಮಲೆಯ ತಾಯಿಗೆ ಅಂದು "ಏನೇ ಕಮಲಿ! ನನ್ನ ಜೊತೆಗೆ ಎಡೆ ತೆಗೆದುಕೊಂಡು ಬರುತ್ತಿಯಾ?" ಎಂದು ಕೋಣೆಯಲ್ಲಿದ್ದ ಆಕೆಯನ್ನು ಒದರಿ ಕೇಳಿದನು. ಕಮಲೆಯು ಉಪಾಯವಿಲ್ಲದ್ದಕ್ಕೆ ಅಲ್ಲಿಂದಲೇ ಹೂಂ ಅಂದಳು.

ಎಡೆಮಾಡಿ ಕೈಯಲ್ಲಿ ತೆಗೆದುಕೊಂಡು ಕಮಲೆಯು ಹೊರ ಟಳು. ಕಂದೀಲನ್ನು ಕೈಯಲ್ಲಿ ತೆಗೆದುಕೊಂಡು ಆಕೆಯ ಕಕ್ಕನೂ ಬರತೊಡಗಿದನು. ನಿದ್ರೆ ಬಂದದ್ದರಿಂದ ಬೇಗನೆ ಎಡೆಕೊಟ್ಟು ಬಂದು ಮಲಗಬೇಕೆಂದು ಆಕಳಿಸುತ್ತ ಮನೆಯ ಹೊರಗಾಗುವಾಗ ಅವಳ ತಾಯಿಯು ಮುದುಕರ ಸ್ವಾಭಾವಕ್ಕನುಗುಣವಾಗಿ "ಇಲ್ಲೇ ಊಟಕ್ಕೆ ಬಂದಿದ್ದರೆ ನೆಟ್ಟಗಾಗುತ್ತಿತ್ತು. ಒಂದಿತ್ತು ಒಂದಿಲ್ಲ, ಅಲ್ಲೇನು ಊಟ ನೆಟ್ಟಗಾಗುತ್ತದೆಯೇ?" ಎಂದು ಗುಣುಗುಟ್ಟು ತ್ತಿದ್ದಳು. ಕಕ್ಕನು ಮಾತ್ರ ಏನೋ ವಿಚಾರಿಸುತ್ತಿದ್ದುದು ನಿಜ. ಏಕೆಂದರೆ ಓಣಿಯಲ್ಲಿ ನಡಿಯುವ ಅವನ ರೀತಿಯೇ ಹಾಗಿತ್ತು. ಒಮ್ಮೆ ಒಂದು ಮಗ್ಗಲಿಗೆ ಹೋಗುವನು; ಮತ್ತೊಮ್ಮೆ ಹಾದಿಯು ಮತ್ತೊಂದು ಮಗ್ಗಲಿಗೆ ಹೋಗುವನು.

ಇತ್ತ ಸಾಹೇಬನು ಕೋಣೆಯಲ್ಲಿ ಕುಳಿತು ಏನೋ ಬರೆಯು ವಂತೆ ನಟಿಸುತ್ತಿದ್ದರೂ ಅವನ ಲಕ್ಷವೆಲ್ಲ ಬಾಗಿಲ ಕಡೆಗೇ. ಒಮ್ಮೆ

ಬರೆಯುವಂತೆ ಅಭಿನಯಿಸುವನು. ಮತ್ತೆ ಮತ್ತೆ ಬಾಗಿಲ ಕಡೆ ನೋಡುವನು. ಎದ್ದೊಮ್ಮೆ ಕಿಡಿಕಿಯಲ್ಲಿ ಇಣಿಕಿಯಿಕ್ಕುವನು. ಮತ್ತೆ ಬಂದು ತನ್ನ ಸ್ಥಳದಲ್ಲಿ ಕೂಡುವನು. ಹೀಗೆ ಅವನ ಸರ್ಕಸ್ಸು ನಡೆದಾಗ ಕಮಲೆಯು ಎಡೆಯನ್ನು ತೆಗೆದುಕೊಂಡು ಅಲ್ಲಿಗೆ ಹೋದಳು. ಬಾಗಲಿಗೆ ಹೋಗಿ 'ಎಲ್ಲಿ ಇಡೋದು?' ಎಂದು ಕಕ್ಕನಿಗೆ ಕೇಳಿದಾಗ 'ಒಳಗೆ' ಎಂದು ತಲೆಯಲುಗಿಸಿ ಹೇಳಿದನು ಆಕೆಯ ಕಕ್ಕ. ಕಕ್ಕನೂ ಹಿಂದೆ ಬರುತ್ತಾನೆಂದು ಭಾವಿಸಿ ಆಕೆ ಒಳಹೊಕ್ಕಳು. ನಾಲ್ಕು ಹೆಜ್ಜೆ ಹೋಗುವುದರಲ್ಲಿಯೇ ಹಿಂದೆ 'ಧಡಕ್' ಎಂದು ಸಪ್ಪ ಳಾಯಿತು. ತಿರುಗಿ ನೋಡಿದಳು ಕಕ್ಕನು ಬಾಗಿಲಿಕ್ಕಿಕೊಂಡು ಹೋಗಿಬಿಟ್ಟಿದ್ದನು. 'ಅಯ್ಯೋ ಮೋಸಾ' ಎಂದಳು. ಎದೆ ಹಾರ ತೊಡಗಿತು. ಕಾಲುಗಳು ನಡುಗಹತ್ತಿದವು, ಬೆವರೊಡೆಯಿತು. ಬಾಗಿಲ ಕಡೆ ಓಡಿದಳು 'ಕಕ್ಕಾ ಕಕ್ಕಾ' ಎಂದು ಕೂಗಿಕೊಂಡಳು. ಬಾಗಿಲನ್ನು ಬಡೆದಳು. ಅತ್ತಳು, ಚೀರಿದಳು, ಗೋಳಿಟ್ಟಳು. "ನಾನು ನಿನ್ನ ಮಗಳಲ್ಲವೇನೋ ಕಕ್ಕಾ! ಹೀಗೆ ನನ್ನ ಕೊರಳು ಕೊಯ್ಯ ಬೇಕೆನೊ?" ಎಂದು ಹಲುಬಿದಳು. "ಕಕ್ಕಾ! ಕಕ್ಕಾ!! ಹೋಗ ಬೇಡ, ಹೋಗಬೇಡ, ಸೆರಗೊಡ್ಡಿ ಬೇಡುವೆ." ಎಂದೆಂದು ಗೋಳಿಟ್ಟಳು.

ಎಲ್ಲಾ ವ್ಯರ್ಥ ಅವಳು ಹಲುಬಿದ್ದು, ಆಲ್ಪರಿದದ್ದು ಅತ್ತಿದ್ದು ಎಲ್ಲಾ ಕೇಳಿ ಕಲ್ಲುಗಳೂ ಕರಗಿರಬಹುದು, ಕಣ್ಣೀರಿಟ್ಟಿರಬಹುದು. ಆದರೆ ಆ ಕಟುಕ ಕಕ್ಕನ ಎದೆಯು ಸ್ವಲ್ಪವೂ ಕರಗಲಿಲ್ಲ. ಕನಿಕರ ಬರಲಿಲ್ಲ. ದುಷ್ಟನು ಯಾವ ಮೂಲೆಯಲ್ಲಿ ಕುಳಿತು ಮೋಜು ನೋಡುತ್ತಿದ್ದನೋ ಯಾರು ಬಲ್ಲರು! "ಕಕ್ಕಾ! ತಾಯಿ! ತಾಯಿ!!" ಎಂದು ಆಲ್ಪರಿದು ಬೇಡಿಕೊಂಡ ಆಕೆಯ ಉಸಿರುಗಳು ಗಾಳಿಯಲ್ಲಿ ತೆರೆಯನೆಬ್ಬಿಸಿ, ಆಕಾಶಕ್ಕೆ ಅದರಿ, ಶೂನ್ಯದಲ್ಲಿ ಲಯವಾದವು.

ಇತ್ತ ಸಾಹೇಬ ಮಾಸಕ್ಕೆ ಎಳಿಸಿ ಬರುವ ನಾಯಿಯಂತೆ ಸಾವ ಕಾಶ ಬರತೊಡಗಿದನು. 'ಯಾಕೆ ಗೋಳಿಡುವಿ? ಏನು ಬೇಕು ಹೇಳು?? ನನ್ನ ಸರ್ವಸ್ವವನ್ನೆಲ್ಲಾ ನಿನಗರ್ಪಿಸುವೆನು. ನಿನ್ನ

ಪ್ರೇಮ ಒಂದಿಷ್ಟು ನೀಡು.'' ಎಂದು ಸಾವಕಾಶವಾಗಿ ಅವಳಿಗೆ ಮುಟ್ಟಬಂದನು. ಆಗ ತನ್ನ ಕೈಯನ್ನು ಕೊಸರಿಕೊಂಡು ''ತಂದೆ! ನನ್ನನ್ನು ಕ್ಷಮಿಸಿರಿ!! ನಾನು ನಿಮ್ಮ ಮಗಳೆಂದು ಕಾಪಾಡಿರಿ. ದುಷ್ಟನಾದ ಆ ಕಕ್ಕ, ದುಡ್ಡಿನ ಆಶೆಗಾಗಿ ಇಲ್ಲವೆ ಮತ್ತಾವದೊಂದರ ಲೋಭಕ್ಕಾಗಿ ನನ್ನನ್ನು ಹೀಗೆ ಒಪ್ಪಿಸುತ್ತೇನೆಂದು ಹೇಳಿರಬೇಕು. ನೀವು ಅದಕ್ಕೆ ಒಪ್ಪಿಕ್ಕೊಂಡಿರಲೂ ಬೇಕು. ಈಗ 'ನನ್ನ ತಂದೆ ಯಾಗಿ ನನ್ನನ್ನು ರಕ್ಷಿಸಿರಿ' ಎಂದು ಬೇಡಿಕೊಳ್ಳುವೆನು. ನಿಮಗೂ ನನ್ನಂತೆ ಹೆಣ್ಣು ಮಕ್ಕಳಿರಬಹುದು. ನನ್ನನ್ನೂ ಅವರಂತೆ ಭಾವಿ ಸಿರಿ.'' ಎಂದು ಕಮಲೆಯು ಪರಿಪರಿಯಾಗಿ ಬೇಡಿಕೊಳ್ಳುವಳು. ಎಷ್ಟು ಬೇಡಿಕೊಂಡರೂ ಕರುಳು ಕರಗದ ಆ ನೀಚನು ಆಕೆಯ ಮೇಲೆ ಕೈ ಹಾಕ ಬಂದಾಗ ದೂರ ಸರಿದು " ದುಷ್ಟಾ! ಮಕ್ಕಳಂತಿ ರುವ ಅನ್ಯ ಬಾಲೆಯರಿಗೆ ಮುಟ್ಟಲಿಕ್ಕೆ ನಾಚಿಕೆ ಬರುವುದಿಲ್ಲವೆ? ಎಂದು ಕಮಲೆ ಅನ್ನಲು ''ಕೋಪಿಸಬೇಡ ಪ್ರಿಯೆ! ನನಗೆ ನೀನು ಪ್ರೇಮದಾನವನ್ನು ನೀಡಿದರೆ ನೀನೆಷ್ಟು ಸುಖದಲ್ಲಿರಬಹುದೆಂಬುದು ಬಲ್ಲೆಯಾ? ಇಕೋ ಈ ನೂರು ರೂಪಾಯಿ ನೋಟನ್ನು ತೆಗೆದುಕೊ. ಸೀರೆ, ವಸ್ತ್ರ, ಒಡವೆಗಳನ್ನು ಕೊಂಡುಕೊ. ನಿನ್ನ ಕಕ್ಕನು ಇದಕ್ಕೆ ಅಡ್ಡ ಬರಲಾರನು. ಅವನೊಪ್ಪಿಗೆಯು ಇದಕ್ಕೆ ತುಂಬಾ ಇದೆ.'' ಎಂದು ನೂರು ರೂಪಾಯಿಯ ನೋಟನ್ನು ಕೊಡಬರುವನು. ಆಕೆ ತೆಗೆದುಕೊಳ್ಳದಿರಲು ''ನೋಡು! ನೀನು ನನಗೆ ಒಲಿದರೆ ನಿನ್ನ ಕಕ್ಕನ ವೇತನ ಇನ್ನೂ ಹೆಚ್ಚಿಸುವೆ. ಹೆಚ್ಚು ವೇತನ ಬಂದಂತೆಲ್ಲಾ ನಿಮಗೆಲ್ಲರಿಗೂ ಸುಖ. ನಿಮ್ಮ ತಾಯಿಯೋ ವಿಧವೆ. ದೊಡ್ಡದಾದ ಪ್ರಪಂಚವನ್ನು ಎಳೆದುಕೊಂಡು ಹೋಗುವುದು ತುಂಬಾ ಕಷ್ಟ ನಿಮ್ಮ ಕಕ್ಕನಿಗೆ. ಯಾಕೆ ನನ್ನನ್ನು ಅನಾದರಿಸಿ ಕಷ್ಟಕ್ಕೆ ಅವರನ್ನು ಗುರಿ ಮಾಡುವಿ? ತಿಳಿದು ನೋಡು. ತಿಳಿದು ನೋಡಿ ನಿನ್ನ ಮನ ಎನಗೆ ನೀಡು.'' ಎಂದು ಮತ್ತೆ ಮುಟ್ಟಹೋಗುವನು. ''ನೀಚಾ ನಾಚಿಕೆ ಯಾದರೂ ಬರುವುದಿಲ್ಲವೆ? ಆ ದುಷ್ಟನ ಒಪ್ಪಿಗೆ ನನಗೇತಕ್ಕೆ ಬೇಕು??

ಎಚ್ಚರದಲ್ಲಿರು. ಹೆಚ್ಚಿಗೇನಾದರೂ ಆದರೆ ಜೀವಕ್ಕೆ ಘಾಸಿ ಮಾಡಿಕೊಳ್ಳುವೆ ನೋಡು" ಎಂದವಳೆ ಅಲ್ಲಿ ಬಾಗಿಲಿಗೆ ಹಚ್ಚಿರುವ ಒಂದು ಕಲ್ಲನ್ನು ಕೈಯಲ್ಲಿ ತೆಗೆದುಕೊಂಡಳು.

ಆದರೆ ಹುಲಿಯ ಬಾಯಿಗೆ ಸಿಕ್ಕ ಹುಲ್ಲೆ ಏನು ಮಾಡಬಲ್ಲದು? ಆ ಮದಾಂಧನ ಮೇಲೆ ಇವಳ ಯಾವ ಮಾತೂ ನಾಟಲಿಲ್ಲ. ಕಡೆಗೆ ಅವಳ ಜನ್ಮವು ವ್ಯರ್ಥವಾಗದೆ ಉಳಿಯಲಿಲ್ಲ.

× × × ×

ಇತ್ತ ಈಗ ಕಮಲೆಯ ಮನೆಯಲ್ಲಿ ಕಮಲೆ ಮತ್ತು ಆಕೆಯ ತಾಯಿಯನ್ನುಳಿದು ಇನ್ನೊಬ್ಬರೆಂದರೆ ಎಣಿಕೆಯಲ್ಲಿ ಹಿಡಿಯಲಿಕ್ಕೆ ಬಾರದ ಎಳೆಮಗು ಸಾವಿತ್ರಿ-ಕಮಲೆಯ ತಂಗಿ. ಈ ಮೊದಲೆ ಕಕ್ಕನು ತನ್ನ ಹೆಂಡರು ಮಕ್ಕಳನ್ನು ಅವರೊಡನೆ ಜಗಳಾಡಿ ಅವರ ತವರೂರಿಗೆ ಕಳುಹಿದನು. ಇಲ್ಲದ ಕಾರಭಾರ ಮಾಡಿ ಬೆಕ್ಕಿನಂತೆ ಈಗ ಆತನು ಆಗಿನ ಮಟ್ಟಿಗೆ ಎಲ್ಲಿಯೋ ಪರಾರಿ ಆಗಿದ್ದದ್ದರಿಂದ ಇನ್ನಾರೂ ಇಲ್ಲದ ಆ ದೊಡ್ಡ ಮನೆಯಲ್ಲಿ ತಾಯಿಯ ತೆಕ್ಕೆಗೆ ಬಿದ್ದು ಕಮಲೆಯು ಒಂದೇ ಸಮನೆ ಬಿಕ್ಕಿ ಬಿಕ್ಕಿ ಅಳತೊಡಗಿದ್ದಾಳೆ. ಏಕೆ ಅಳುತ್ತಾಳೆಂಬುದರ ಗುಟ್ಟು ತಾಯಿ ಅರಿಯಳು. ಎಷ್ಟು ಕೇಳಿದರೂ ಏನನ್ನೂ ಹೇಳದೆ ಮತ್ತೆ ಮತ್ತೆ ಅಳತೊಡಗಿದಳು. ಅದನ್ನು ನೋಡಿ ತಾಯಿಯ ಎದೆ ಬಡೆಯ ತೊಡಗಿತು. 'ನನ್ನ ಮಗುವಿಗೆ ಏನಾಗಿರ ಬೇಕು?' ಎಂದು ಮತ್ತೆ ಹಲವು ಪರಿಯಿಂದ ಆಕೆಗೆ ಕೇಳಿದಳು. ಅದಕ್ಕೂ ಉತ್ತರ ಬಾರದಿರಲು ತಾನು ಕಣ್ಣೀರು ಗರೆಯುತ್ತ "ಮಗು! ಕಮಲಾ!! ಏಕೆ ಅಳುತ್ತೀಯಮ್ಮಾ? ಏನು ನೋವಾಗಿದೆ ನಿನಗೆ?" ಎಂದು ಅವಳ ತಾಯಿಯು ಗಲ್ಲಗಳನ್ನು ಹಿಡಿದು ಅಲ್ಪರಿಯ ತೊಡಗಿದಳು. ಆಗ ಅವಳು ತಾಯಿಯನ್ನು ಮತ್ತಷ್ಟು ಬಿಗಿಯಾಗಿ ಅಪ್ಪಿಕೊಂಡು "ಅವ್ವಾ! ಅವ್ವಾ!! ನಾನಿನ್ನು ಹೇಗೆ ಬಾಳಲಿವ್ವಾ!!!" ಎಂದನ್ನುತ್ತ ಮತ್ತೆ ಅಳತೊಡಗಿದಳು. ಆಗಂತೂ

ತಾಯಿಯ ಕರುಳು ಕತ್ತರಿಸತೊಡಗಿದವು. "ಅಯ್ಯೋ! ನನ್ನ ಪ್ರಾಯದ ಮಗಳಿಗೆ ಏನಾಯಿತು? ಎಂದು ಬಗೆಗುಂದಿ "ಹೇಗೆ ಮಗು! ಏನಾಗಿದೆ ಹೇಳು!! ನಿನ್ನ ನೋವನ್ನು ನನ್ನ ಮುಂದೆ ಹೇಳದೆ ಇನ್ನಾರ ಮುಂದೆ ಹೇಳುವಿ? ನೀನು ಅತ್ತತ್ತು ಗೋಳಿಟ್ಟಿಂತೆಲ್ಲಾ ನನಗೆ ಕಸವಿಸಿಯಾಗುತ್ತಲಿದೆ." ಎಂದೆನ್ನುತ್ತ ತಾಯಿಯು ಅವಳನ್ನು ತನ್ನೆದೆಯಲ್ಲಿ ತಬ್ಬಿಕೊಂಡು ಪರಿಪರಿಯಾಗಿ ಕೇಳತೊಡಗಿದಳು. ಕಡೆಗೆ ಉಕ್ಕಿಬರುವ ಬಿಕ್ಕಗಳನ್ನು ತಡೆತಡೆದು ಎಲ್ಲವನ್ನು ಹೇಳಿದಳು. ಕಕ್ಕನ ನಿಂದ್ಯವಾದ ಕೃತ್ಯವನ್ನೂ ತನ್ನ ದುರ್ದೈವವನ್ನೂ ತೋಡಿಕೊಂಡು ಕೋಡಿಕೋಡಿಯಾಗಿ ಕಣ್ಣೀರಿಟ್ಟಳು. ಇದನ್ನು ಕೇಳಿದ ತಾಯಿಯು ಗೋಳು ಬಣ್ಣಿಸಲಳವಲ್ಲ.

ಅವರ ಆ ಮನದ ಬೇಗೆಯನ್ನು ಹೊರಗೆ ಪ್ರಕಟಿಸಲು ಅವರು ತುಂಬಾ ಹೆದರಿದರು. ಯಾಕೆಂದರೆ ಕಮಲೆಯ ಕಕ್ಕನು ತನ್ನ ಮನದ ಮಾತನ್ನು ಎಂದಿಗೂ ಬಿಡದ ಹಟಮಾರಿಯೂ ಚೆಂಡಿಯೂ ಇದ್ದಂತೆ ದರ್ಪವುಳ್ಳವನೂ ಆಗಿದ್ದನು. ಇವನ ದರ್ಪಕ್ಕೆ ನೆರೆಯವರು ಹೆದರುತ್ತಿರುವಾಗ ಈ ಅಬಲೆಯರ ಪಾಡೇನು!

ಆ ತಾಯಿ ಮತ್ತು ಮಗಳು ದಿನ ಕಳೆದ ಹಾಗೆಲ್ಲ ಒಳಗೊಳಗೇ ಕೊರಗಿ ಸಣ್ಣಾಗತೊಡಗಿದರು. ತಮಗಾದ ಸಂತಾಪವನ್ನು ತಮ್ಮ ದಿನಚರಿಯ ಕೆಲಸಗಳಲ್ಲಿ ತೋರಿಸುತ್ತಿದ್ದರೆ ಹೊರತು ಬಾಯಿಯಿಂದ ಆಡಿ ತೋರಿಸಲಿಲ್ಲ. ಒಮ್ಮೊಮ್ಮೆ ಆತನು ಎಷ್ಟು ಒದರಿದರೂ ಇವರು ಓ ಕೊಡುತ್ತಿರಲಿಲ್ಲ. ಮತ್ತೊಮ್ಮೊಮ್ಮೆ ಆತನಿದಿರು ದೊಪ್ಪನೆ ಕೈಯೊಳಗಿನ ಸಾಮಾನುಗಳನ್ನು ಇಕ್ಕರಿಸುತ್ತಿದ್ದರು. ಇದೆಲ್ಲಾ ಆ ಕಕ್ಕನಿಗೆ ಗೊತ್ತಾಗದೆ ಇರುತ್ತಿದ್ದಿಲ್ಲ. ಆದರೂ ಆತನೂ ಕೂಡ ಇದಾವುದೂ ತನಗೆ ಗೊತ್ತಾಗದವನಂತೆ ನಟಿಸುತ್ತಿದ್ದನು.

ಈಗ ಎರಡು ತಿಂಗಳಾದರೂ ಕಮಲೆಗೆ ಮುಟ್ಟಾಗದಿದ್ದುದರಿಂದ ವಿಪರೀತವೇನಾದರೂ ಆಯಿತೋ ಏನೋ ಎಂದು ತಾಯಿ

ಮಕ್ಕಳಿಬ್ಬರೂ ಹೆಚ್ಚುಹೆಚ್ಚಾಗಿ ಚಿಂತಿಸತೊಡಗದರು. ಆ ಚಿಂತೆ ಯಲ್ಲಿಯೇ ಕಮಲೆಯ ಮೋರೆಯು ಬಿಳುಪೇರಿತು. ಅದನ್ನು ಕಂಡು ನೀರಾಜನ ಹಿಡಿದುಕೊಂಡು ಪುರಾಣಕ್ಕೆ ಹೊರಟ ಅಮ್ಮಗಳಲ್ಲಿ ಆವಳೋ ಒಬ್ಬಳು "ಮಾಸ್ತರ ಕಮಲಿ ಹೀಗ್ಯಾಕೆ-ಆಗಿದ್ದಾಳೆ? ಬಯಕೆಯೇನಾದರೂ ಕಾಡುವವೆ ಅವಳಿಗೆ?" ಎಂದು ಸರಳವಾಗಿ ವಿನೋದ ಮಾಡಿದಳಂತೆ. ಅದನ್ನು ಕೇಳಿದ ಮತ್ತೊಬ್ಬಳು "ಅಯ್ಯೋ! ಈ ಸಂಶಯ ಬಂದು ನಾಲ್ಕು ತಿಂಗಳಾಯಿತು" ಎಂದು ಅಂದಳು. ಇವನ್ನೆಲ್ಲಾ ಕೇಳಿದ ಮತ್ತೊಬ್ಬಳು ಮಗದೊಬ್ಬಳ ಮುಂದೆ ಇದಕ್ಕೂ ವಿಸ್ತೃತ ಮಾಡಿ ಹೇಳಿದಳು. ಅಂತೂ ಒಬ್ಬರಿಂ ದೊಬ್ಬರೆಡೆಗೆ ಸಾಗುತ್ತ ಪುರಾಣ ಮುಗಿಯುವದರಲ್ಲಿಯೇ ಊರ ಅಮ್ಮಗಳ ಬಾಯಲ್ಲೆಲ್ಲಾ ಕುಣಿಯ ತೊಡಗಿತು. ಆ ಮೇಲೆ ಕೇಳು ವುದೇನು? ಮೂರು ಜನರ ಬಾಯಿಗೆ ಮುಟ್ಟಿದ ಮಾತು ಮೂರು ಗಳಿಗೆಯಲ್ಲಿಯೇ ಮೂರು ಲೋಕಕ್ಕೆ ಮುಟ್ಟುತ್ತಿರುವಾಗ ನೂರು ಜನರ ಬಾಯಿಗೆ ಮುಟ್ಟಿದ ಮಾತು ಎಲ್ಲಿಗೆ ಹೋದೀತು. ಹೇಳ ಬಂದೀತೆ? ಈ ಸುದ್ದಿಯು ಕೊನೆಗೆ ಮುಖ್ಯ ಆಚಾರ್ಯರವರೆಗೆ ಹೋಯಿತಲ್ಲದೆ ಇತ್ತ ಕಕ್ಕನ ಕಿವಿಗೂ ಬಂತು. ಕಕ್ಕ ಗಾಬರಿಯಾ ದನು. ತನ್ನ ಕೃತಿಯು ಹೊರಬೀಳುವುದೋ ಏನೋ ಎಂದು ಕೊಂಡು ಏನಾದರೂ ಮಾಡಿ ತನ್ನ ತಪ್ಪನ್ನು ಮುಚ್ಚಿಕೊಳ್ಳಲು ಹವಣಿಸಿ ಪ್ರಸಂಗವನ್ನೇ ಕಾದು ಕುಳಿತನು.

ಕಮಲೆಯ ಚಿಂತೆಯಲ್ಲಿಯೇ ಕೊರಗಿ ಸೊರಗಿದ ತಾಯಿಯು ಆಕೆಯ ಕಕ್ಕನೊಡನೆ ಮಾತಾಡಿ ಏನಾದರೂ ವ್ಯವಸ್ಥೆ ಮಾಡ ಬೇಕೆಂದು ಬಯಸಿದಳು. ಒಂದು ದಿನ ರಾತ್ರಿ ಹತ್ತು ಘಂಟೆಯ ಸುಮಾರಿಗೆ ಅವನು ಒಬ್ಬನೇ ಕುಳಿತಾಗ ಸಾವಕಾಶವಾಗಿ ಈ ಮಾತನ್ನು ಎತ್ತಿದಳು. "ಆಯ್ತು ಯಾರತಪ್ಪೆ ಆಗಲಿ ಆಗಿಹೋದ ಮಾತಿಗೆ ಮಾಡುವುದೇನು? ಪ್ರಾಯಶ್ಚಿತ್ತವನ್ನಂತೂ ಭೋಗಿಸಲೇ ಬೇಕು. ಏನಾದರೂ ಮಾಡಿ............ಎಂದು ಇನ್ನೂ ಮಾತಾಡು

ವವಳಿದ್ದಳು. ಅಷ್ಟರಲ್ಲಿಯೇ ಕಣ್ಣನ್ನು ಕೆರಳಿಸಿ "ಯಾರ ತಪ್ಪು? ಆಗಿಹೋದ ಮಾತೇನು??" ಎಂದು ಗಟ್ಟಿಸಿ ನುಡಿದನು ಕಕ್ಕ. ಆಗ ಆಕೆ ಬೆದರಿ, ಸ್ವಲ್ಪ ತಡೆದು ದಿಟ್ಟತನದಿಂದ "ಮುಚ್ಚಿಕೊಂಡು ಕೊಡುವುದರಲ್ಲೇನು ಅರ್ಥವಿದೆ? ನಿಮ್ಮ ಕೆಟ್ಟ ಮನಸೇ ಆ ಸಾಹೇಬನಿಗೆ ಬಲಿಕೊಟ್ಟು ಅವಳನ್ನಿಷ್ಟು ಗೋಳಿಗೀಡು ಮಾಡಿದೆ. ಅವಳಿಗೀಗ ಎರಡು ತಿಂಗಳು 'ಮುಟ್ಟಿಲ್ಲ'. ಈ ತಪ್ಪಿನಿಂದ ಓರೆಯಾಗಿದೆ ನೀವು ಏನಾದರೂ ಅವಳ ವ್ಯವಸ್ಥೆ ಮಾಡಲೇಬೇಕು." ಎಂದು ಏರು ದನಿಯಲ್ಲಿ ಆಕೆಯ ತಾಯಿಯು ನುಡಿದಳು.

"ಇಂಥ ನೀಚರು ನಮ್ಮ ಮನೆಯಲ್ಲಿ ಇರಬಾರದು. ಈ ಕಮಲಿ! ಇಂಥ ಕಳ್ಳ ಸ್ವಭಾವದವಳೆಂಬುದು ನನಗೇನು ಗೊತ್ತು. ಈಕೆ ನಮ್ಮಮನೆಯ ಮಾನ ಕಳೆದು ಬಿಟ್ಟಳು. ಜೀವಕ್ಕಿಂತ ಜತ್ನನ ಮಾಡಿಬೆಳಿಸದ ಈ ದುಷ್ಟೆ ಈ ಊರಲ್ಲಿ ಮೋರೆ ಎತ್ತದಂತೆ ಮಾಡಿಟ್ಟಳಲ್ಲಾ! ಇಂಥ ಪಾಪಿಗಳನ್ನು ನನ್ನ ಮನೆಯಲ್ಲಿ ನಾನು ಸರ್ವಥಾ ಇಟ್ಟುಕೊಳ್ಳಲಾರೆ. ಈಗಿಂದೀಗಲೇ ತನ್ನ ಹಾದಿಯನ್ನು ತಾನು ನೋಡಿಕೊಳ್ಳಲಿ. ಈ ತಪ್ಪಿಗೆ ನಾನು ಕಾರಣನೆಂದು ಹೇಳಿದಳಂತೆ." ಎನ್ನುತ್ತ ಗರ್ಜಿಸತೊಡಗಿದನು.

"ಸುಮ್ಮನೆ ಗರ್ಜಿಸುವುದೇಕೆ?" ಎಂದು ಸಪ್ಪಗಿನ ಮೋರೆಯಿಂದ ತಾಯಿಯು ಅಂದಳು. ಆಗ ಕಮಲೆಯು ಕಣ್ಣೀರಿಡುತ್ತಾ ಬಾಗಿಲಲ್ಲಿ ನಿಂತಿದ್ದಳು.

"ಅಬ್ಬಬ್ಬಾ ಕಮಲಿ ಈ ಇಂಥ ಅನಾಚರಣೆ ಮಾಡಿದಳೆ? ಇದರಲ್ಲಿ ಮಾನವಂತು ಹೋಗೇ ಹೋಯಿತು. ಕುಲಕ್ಕೂ ಧಕ್ಕೆ. ಅಯ್ಯೋ! ನಾ ಸಹಿಸಲಾರೆ ಏನನ್ನೂ ವಿಚಾರಿಸಲು ನನಗಿಚ್ಛೆಯಿಲ್ಲ. ಅವಳನ್ನು ಈಗಿಂದೀಗಲೇ ಮನೆಯ ಹೊರಗೆ ಹಾಕಬೇಕು. ಅವಳನ್ನು ಹೊರಗೆ ಹಾಕೇ ಎರಡನೆಯ ಕೆಲಸ." ಎಂದವನೇ "ಕಮಲೆ! ಕಮಲೆ!! ಎಲ್ಲಿದ್ದಿಯೇ ದುಷ್ಟೇ?" ಎಂದು ಬಾಗಿಲ ಕಡೆಗೆ ಹೋದನು.

"ಕಕ್ಕಾ! ಯಾರ ತಪ್ಪು ಯಾರಿಗೆ ಶಿಕ್ಷೆ?" ಎಂದು ಬಾಯಿಂದ ಆಕೆಯ ಸ್ವರ ಹೊರಡುವುದರಲ್ಲಿಯೇ "ದುಷ್ಟೇ ಯಾರ ತಪ್ಪು ಯಾರಿಗೆ ಶಿಕ್ಷೆ? ಎನ್ನುತ್ತಿದ್ದಿಯಾ?? ನಿನ್ನ ತಪ್ಪು ನಿನಗೆ ಶಿಕ್ಷೆ." ಎಂದವನೆ ಕುತ್ತಿಗೆಗೆ ಕೈಹಾಕಿ ಹೊರಗೆ ನೂಕಿ ಬಿಟ್ಟನು.

"ಅವಳು ಏನೋ ಹೇಳಬೇಕೆನ್ನುವಳು, ಕೇಳುವುದಾದರೂ ಕೇಳಿರಿ" ಎಂದು ಕಣ್ಣೀರಿಡುತ್ತ ಆಕೆಯ ತಾಯಿಯು ಅನ್ನಲು "ದುಷ್ಟೇ! ಇದಕ್ಕೆ ನಿನ್ನದೂ ಅನುಮತಿ ಇದ್ದಿರಬೇಕು. ತನ್ನ ತಪ್ಪನ್ನು ಮುಚ್ಚಿಕೊಳ್ಳಲು ನನ್ನ ಮೇಲೆ ಹಾಕುತ್ತಿದ್ದಾಳೆ. ನಿನ್ನ ಅನುಮತಿ ಇರದೆ ಇಂಥ ಕಾರ್ಯ ಸರ್ವಥಾ ಆಗಲಾರದು. ನಡೆ, ನೀನೂ ನಡೆ ನನ್ನ ಮನೆಯಿಂದ." ಎಂದು ಕುತ್ತಿಗೆಗೆ ಕೈಹಾಕಿ ಅವಳನ್ನು ನುಗಿಸಿದನು. ಇದನ್ನೆಲ್ಲ ನೋಡುತ್ತನಿಂತ ಸಣ್ಣ ಹುಡುಗಿಯಾದ ಸಾವಿತ್ರಿಯು ಅಳುತ್ತ ತಾಯಿಯ ಹತ್ತಿರ ಬಂದಳು. ಅಂತೂ ಆ ಅಪರಾತ್ರಿಯಲ್ಲಿ ಮೂರೂ ಜನರೂ ಮನಯು ಹೊರಗಾದರು.

ಅವರನ್ನು ಮನೆಯ ಹೊರಗಟ್ಟಿ ಕಕ್ಕನು ಬಾಗಿಲು ಹಾಕಿಕೊಂಡನು. ತಾಯಿಯು ಎಷ್ಟು ಪರಿ ಬೇಡಿಕೊಂಡರೂ ಆತನು ಬಾಗಿಲ ತೆರೆಯಲಿಲ್ಲ. ಇಷ್ಟೇ ಅಲ್ಲ ಒಟ್ಟಿಂದು ಮಾತಾಡಲೂ ಇಲ್ಲ. ಸಪುರಾತ್ರಿಯಾಯಿತು. ಮೇಲೆ ಮತ್ತೆ ಎರಡು ತಾಸಾಯಿತು. ಹಲುಬೇ ಹಲುಬಿದರು. ಅತ್ತರು, ಚೀರಿದರು, ಬೇಡಿಕೊಂಡರು. ಎಲ್ಲಾ ಅರಣ್ಯರೋದನವೇ.

ಆವರ ಅಳುವನ್ನು ಕೇಳಿ ನೆರೆಹೊರೆಯವರು ನೆರೆದು ಕಮಲೆಯ ಕಕ್ಕನಿಗೆ ಇವರನ್ನು ಮನೆಯಲ್ಲಿ ಕರೆದುಕೊಳ್ಳಲು ಪರಿಪರಿಯಾಗಿ ಹೇಳಿದರು. ಅವರಾರ ಮಾತಿಗೂ ಆತನು ಕಿವಿಗೊಡಲಿಲ್ಲ. ಇಷ್ಟೇ ಅಲ್ಲ ಅವರೆಲ್ಲರನ್ನೂ ಬೆದರಿಸಿ ಕಳುಹಿಸಿದನು. ಬಂದವರೆಲ್ಲ ನಿರ್ವಾಹವಿಲ್ಲದೆ ತಮ್ಮ ತಮ್ಮ ಮನೆಗೆ ಹೋದರು. ಹೋಗುವಾಗ "ಏನಮ್ಮಾ!

ಕರೆದುಕೊಳ್ಳದಿದ್ದರೆ ಬಿಡಲೊಲ್ಲನೇಕೆ. ಇಂಥ ಅಪರಾತ್ರಿಯಲ್ಲಿ ನೀವು ಎಲ್ಲಿಗೆ ಹೋಗುವಿರಿ ? ನಡೆಯಿರಿ ನಮ್ಮನೆಗೆ. ನಮ್ಮನೆಯಲ್ಲಿಯೇ ಇರುವಿರಂತೆ," ಎಂದನ್ನಲು ಅದಕ್ಕೆ ಕಮಲೆಯ ತಾಯಿಯು "ನಮ್ಮ ಮನೆಯೇ ನಮಗೆ ಸ್ಥಳಕೊಡದಾಗ ಹೆರವರ ಮನೆ ಎಲ್ಲಿ ನಮಗೆ ಕಡೆಗೆ ಹಚ್ಚಬೇಕು ? ಎಂದುಕೊಂಡು ಆ ಕಪ್ಪಾದ ರಾತ್ರಿಯಲ್ಲಿ ತಾಯಿಯು ಮಕ್ಕಳಿಬ್ಬರನ್ನೂ ಕರೆದುಕೊಂಡು ಧರ್ಮಶಾಲೆಗೆ ಹೋದಳು. ಆಗ ಅವರಿಗೆ ಕಾಲನ ಕರಾಳವಾದ ಬಾಯಿಯಲ್ಲಿ ಹೋಗುತ್ತಿರುವಂತೆ ಅನಿಸಿತು ಎಡವುತ್ತ ಮುಗ್ಗುತ್ತ ಧರ್ಮಶಾಲೆಯನ್ನು ಕಂಡು ಒಂದು ಮೂಲೆಯಲ್ಲಿ ಮೂವರೂ ಮುದುಡಿಕೊಂಡು ಮಲಗಿದರು. ಅವರಿಬ್ಬರ ಮಗ್ಗುಲಲ್ಲಿ ಮಲಗಿದ ಕೂಸಾದ ಸಾವಿತ್ರಿಗೇನೋ ನಿದ್ರೆ ಹತ್ತಿತು. ಆದರೆ ಅವರಿಗೆಲ್ಲಿಂದ ನಿದ್ರೆ ಬರಬೇಕು? ಅವರ ಹೊಟ್ಟೆಯ ಉರಿಯು ಮುಗಿಲಿಗೆ ಮುಟ್ಟಿದ್ದರಿಂದ ಒಮ್ಮೆ ಸುಣ್ಣಾಗುತ್ತಲೂ ಮತ್ತೊಮ್ಮೆ ದುಃಖದಂಬುಧಿಯಲ್ಲಿ ತೇಲುತ್ತಲೂ ನೆಲವೇ ಹಾಸಿಗೆ ಆಕಾಶವೇ ಹೊದಿಕೆಯನ್ನಾಗಿ ಮಾಡಿಕೊಂಡು ಈ ಮೊದಲ ದಿನವನ್ನು ಕಳೆದರು.

ಮರುದಿನ ಕಕ್ಕನಿಗೆ ಕರುಣೆಬರಬಹುದೆ? ಎಂದು ಯತ್ನಿಸಿದಳು ತಾಯಿ. ಕಟುಕನಿಗೆ ಎಲ್ಲಿಯ ಕರುಣೆ ಬರಬೇಕು ! ಆ ಕರುಣೆಯ ಅಂಶವು ಅವನಲ್ಲಿದ್ದರೆ ಆತನು ಕಮಲೆಗಿಂಥ ಗತಿಗೇಡು ಮಾಡುತ್ತಿದ್ದನೆ?? ಆಯ್ತು ಕಡೆಗೆ ಊರು ಬಿಡುವ ಪ್ರಸಂಗವೇ ಬಂದು ಬಿಟ್ಟಿತು. ಆಗ ಅವರು ಪಟ್ಟಕಷ್ಟ ಹೊಂದಿದ ಬಳಲಿಕೆ ಅವನ್ನಿಲ್ಲಿ ಏನನೂ ಹೇಳಲಿಕ್ಕಾಗದು.

ಊರು ಬಿಟ್ಟದ್ದೇನೋ ಬಿಟ್ಟರು. ಆದರೆ ಎಲ್ಲಿಗೆ ಹೋಗಬೇಕೆಂದು ಮಾತ್ರ ಅವರು ಕಲ್ಪಿಸಿರಲಿಲ್ಲ. ತಲೆ ಮತ್ತು ಕಾಲುಗಳು ತಮ್ಮ ಕೆಲಸವನ್ನು ತಾವು ಮಾಡುತ್ತಿದ್ದರೂ ದೇಹವು ಎಲ್ಲಿದೆ ಎಂಬ ಅರಿವು ಅವರಿಗೆ ಇರಲಿಲ್ಲ. ಹೀಗೆ ಉಪವಾಸ ವನವಾಸಗಳನ್ನನುಭವಿಸುತ್ತ ಕಡೆಗೆ ಬೆಂಗಳೂರನ್ನು ಸೇರಿದರು. ಬೆಂಗಳೂರನ್ನು

ವುುಟ್ಟಿದರು ಅಷ್ಟೆ. ಅಲ್ಲೇನು ಇವರ ಹಿರಿಚಿಗಪ್ಪನ ಮಕ್ಕಳಿದ್ದಾರೆಯೆ? ಅಲ್ಲಿಯೂ ಅದೇ ಗತಿ. ಬಯಲೇ ಆಲಯ. ಹಳ್ಳಿಗಳಲ್ಲಿ ಗುಡಿಗುಡಾರಗಳಲ್ಲೆಲ್ಲಾದರೂ ಬಿದ್ದುಕೊಂಡಿರಬಹುದಾಗಿತ್ತು. ಆದರೆ ಅಲ್ಲೆಲ್ಲಿ ಬೀಳಬೇಕು? ರಸ್ತೆಯೂ ಕೂಡ ಸ್ಥಳಕೊಡದಾಯಿತು ಅವರಿಗೆ. ಆಗಿನ ಕಾಲವನ್ನು ಹೇಗೆ ಕಳೆದರೋ ದೇವರೇಬಲ್ಲ.

ಕೂಳಿಲ್ಲದೆ ದಗದಗಿಸುತ್ತಿದ್ದ ಅವರ ಹೊಟ್ಟೆಯ ಉರಿಯು ಈಗ ಮತ್ತಷ್ಟೂ ಪ್ರಜ್ವಲಿಸತೊಡಗಿದೆ. ಅದನ್ನು ಶಾಂತಮಾಡಲು ಅನ್ನದ ಆಹುತಿ ಬೇಕಲ್ಲ! ಎಲ್ಲಿಂದ ತರಬೇಕು? ಬಿಕ್ಕಿ ಬೇಡ ಬೇಕೆ? ಅಥವಾ ಕೂಲಿಗೆ ಹೋಗಬೇಕೆ?? ಎಂದು ಕೊಂಡರು. ಕಡೆಗೆ ಕೂಲೀ ಹುಡುಕತೊಡಗಿದರು. ಹೊಸಬರಾದ ಅವರಿಗೆ ಒಮ್ಮೆಲೆ ಎಲ್ಲಿ ಸಿಗಬೇಕು ಕೂಲಿ? ಸನಿಕೂಡ ಯಾರೂ ಬರಗೊಡಲಿಲ್ಲ. ಬಿಕ್ಕೆ ಬೇಡಲು ಮನಸ್ಸಾಗಲಿಲ್ಲ. ಹೀಗೆ ಉಪವಾಸ ವನವಾಸಗಳಿಂದ ಕಾಲವನ್ನು ಕಳೆದರು.

ಇಂಥ ಅವರ ಉಪವಾಸದ ದಿನಗಳನ್ನು ನೋಡಿಯಾದರೂ ಎಷ್ಟುದಿನ ನೋಡಿಯಾನು ದೇವರು. ಕಡೆಗೆ ತಾಯಿಗೂ ಕಮಲೆಗೂ ಕೂಡಿಯೇ ಕೂಲಿ ಸಿಕ್ಕಿತು. ಅವರು ತಮ್ಮ ಅನ್ನದ ಅಗ್ಗಿಷ್ಟಿಗೆಯನ್ನು ಮೊದಲು ಶಾಂತಗೊಳಿಸಿ ನಂತರ ಒಂದು ಹೊಲಸು ಓಣಿಯಲ್ಲಿ ಘಟಾರದ ಮೇಲಿದ್ದ ಮುರುಕು ಕೋಣೆಯೊಂದನ್ನು ಬಾಡಿಗೆಗೆ ಹಿಡಿದರು. ನಸುಕಿನಲ್ಲೆದ್ದು ಅಡುಗೆಮಾಡಿಕೊಳ್ಳುವುದೂ ಎಲ್ಲರಿಗಿಂತ ಮೊದಲೇ ಕೂಲಿಗೆ ಹಾಜರಾಗುವುದೂ ಹತ್ತು ಹನ್ನೆರಡು ತಾಸು ಮೈತುಂಬಾ ದುಡಿದು ಮನೆಗೆ ಬರುವುದು ಹೀಗೆ ನಡೆಯಿತು ಅವರ ದಿನಚರಿ.

ಈ ಪ್ರಕಾರ ಸ್ವಲ್ಪ ನೆಮ್ಮದಿಯಾಗಿ ಇರುವುದನ್ನು ನೋಡಿಕೊಂಡೇ ಏನೋ ಕಾಲನು ಮತ್ತೊಂದು ಗಂಡಾಂತರವನ್ನು ತಂದು ಒಡ್ಡಿದನು.

ಕಾಮುಕರು ತಮ್ಮ ಕಾಕ ದೃಷ್ಟಿಯನ್ನು ಯಾವಾಗಲೂ ಪರ ಹೆಂಗಳೆಯರ ರೂಪಲಾವಣ್ಯಕ್ಕೆ ತೊಡಗಿಸಿ ಅವರನ್ನು ದೋಚಿ ಕೊಂಡು ಹೋಗಲು ಸಾಧಿಸುತ್ತಾರೆ. ಈ ವೃತ್ತಿಯು ಹಳ್ಳಿಗಳ ಲ್ಲಷ್ಟೇ ಅಲ್ಲ, ಪಟ್ಟಣಗಳಲ್ಲಿಯೂ ಉಂಟು. ಇಂಥ ಕಾಮುಕ ಹದ್ದು ಗಳ ದೃಷ್ಟಿಗೆ ಕಮಲೆಯ ರೂಪವು ನಂಜಾಗದೆ ಇರಲಿಲ್ಲ. ಆಯಿತು ಇಂಥ ಎಷ್ಟೋ ಹದ್ದುಗಳು ಅವರ ಮನೆಯ ಸುತ್ತು ಸುಳಿಯತೊಡ ಗಿದವು. ಹಿಂದಿನದೆಲ್ಲಾ ಮರೆತು ನೀರಿನಲ್ಲಿ ಸ್ವಚ್ಛಂದವಾಗಿ ಆಡುವ ಮೀನಿನಂತೆ ಯಾವ ಕಲ್ಪನೆಯೂ ಇಲ್ಲದೆ ಶಿವಾಶಿವಾ! ಎನುತ್ತ ಜೀವನವನ್ನು ಸಾಗಿಸತೊಡಗಿದ ಅವರಿಗೆ ಮೇಲೆ ಮೀನು ಬಡಿಯುವ ಹಕ್ಕಿಗಳು ಹಾರುತಿವೆಯೆಂಬುದು ಏನುಗೊತ್ತು?

ಇದೀಗ ರಾತ್ರಿಯಾಗಿದೆ. ಮುಪ್ಪಿನ ತಾಯಿ ಹಗಲು ಹೊತ್ತೆ ಲ್ಲಾ ಕೆಲಸಮಾಡಿ ದಣಿದು ಒತ್ತಟ್ಟಿಗೆ ಮಲಗಿದ್ದಳು. ಹೊರಳಾಡು ವುದೂ ಮೈಮುರಿದುಕೊಳ್ಳುವುದೂ ನೋಡಿದರೆ ಆಕೆಯ ಮೈನೋ ವಾಗುತ್ತಿರಬಹುದೆಂದೆನಿಸುತ್ತಿತ್ತು ''ಅವ್ವಾ! ಮೈನೋವಾಗುತ್ತಿ ದೆಯೇ? ಸ್ವಲ್ಪ ಒತ್ತಲಿಯಾ??" ಎಂದೆಂದು ಕಮಲೆಯು ಮೈ ಮೇಲೆ ಕೈಯಿಟ್ಟಳು. ಚಿಂತೆಯಲ್ಲಿ ಆಕೆಯ ಮೈ ಬಡವಾಗಿ ಮೂಳೆ ಗಳು ಮೇಲೆ ಎದ್ದಿರುವುದನ್ನು ಕಂಡು ಕಮಲೆಯ ಕರುಳು ಕತ್ತರಿಸಿ ದುವು ಕಣ್ಣೀರಿಟ್ಟಳು. ಆಗ ಅಲ್ಲೇ ಹಚ್ಚಿಟ್ಟ ಕಲ್ಲೆಣ್ಣೆಯ ದೀವಿ ಗೆಯು ಕಾಡಿಗೆಯನ್ನು ಕಾರುತ್ತ ಅವರ ದೀನತೆಯನ್ನು ಕಂಡು ಕರುಣೆಗೊಂಡು, ಮ್ಲಾನವದನದಿಂದ ಸುತ್ತಿನದೆಲ್ಲವನ್ನು ನೋಡು ತ್ತಿತ್ತು. ಆಗಾಗ ಕಣ್ಣು ಬಡಿಯುತ್ತ ಕುಳಿತ ಆ ದೀವಿಗೆಯ ಕಣ್ಣು ತಪ್ಪಿಸಿ ಕೆಲಜನ ದುಷ್ಟರು ಕಮಲೆಯನ್ನೆತ್ತಿಕೊಂಡೊಯ್ಯಲು ಹೊಂಚು ಹಾಕಿದ್ದು ಅದಕ್ಕೆ ಗೊತ್ತಿರಲಿಕ್ಕಿಲ್ಲವೋ ಏನೋ! ದೀವಿ ಗೆಯ ಕಣ್ಣನ್ನು ಮುಚ್ಚಿ ಒಮ್ಮೆಲೆ ಆ ನೀಚರು ಒಳಹೊಕ್ಕರು. ಒಳಹೊಕ್ಕವರೆ ಕಮಲೆಯನ್ನು ಗಟ್ಟಿಯಾಗಿ ಹಿಡಿದು ಬಾಯಿಗೆ ಅರಿವೆ ತುರುಕಲುದ್ಯುಕ್ತರಾದರು. ಇದನ್ನೆಲ್ಲ ನೋಡಿದ ತಾಯಿ

ಗಾಬರಿಗೊಂಡು ಒದರತೊಡಗಿದಳು. ಕಮಲೆಯು ಅವರ ಕೈಯೊಳ ಗಿನಿಂದ ಕೊಸರಿಕೊಳ್ಳುತ್ತ ಚೀರಿದಳು. ರಾತ್ರಿಯ ನಿಶ್ಯಬ್ದತೆಯಲ್ಲಿ ಆ ಗದ್ದಲವು ಓಣಿಯ ನಾಲ್ಕೂ ಮಗ್ಗಲಿಗೆ ಹಬ್ಬಿತು. ದೈವವಶಾತ್ ದೇವರೇ ಕಳಿಸಿಕೊಟ್ಟಂತೆ ಗಸ್ತಿಯ ಪೋಲಿಸರು ಅಲ್ಲಿಗೆ ಬಂದು ಬಿಟ್ಟರು. ಕೋಣೆಯಲ್ಲಿ ನಡೆದ ಆ ಎಲ್ಲ ಗದ್ದಲವು ಆವರಿಗೆ ಗೊತ್ತಾಗಿ "ಕೋನಹೈ, ಕ್ಯಾಂಥಾಂದಲ್ ಚಲಾಹೈ" ಎಂದು ಗದ ರಿಸಿ ಕೇಳಿದರು. ಅವರ ಆ ದನಿಯು ಈ ದುಷ್ಟರ ಕಿವಿಗೆ ಬೀಳು ವುದೇ ತಡ ಕಾಲಿಗೆ ಬುದ್ಧಿಹೇಳಿದರು.

ಬಂನ ಕುತ್ತು ಬಯಲಾಯಿತು. ಬೆಕ್ಕಿನ ಪಂಜರದಿಂದು ಳಿದು ಬಂನ ಇಲಿಯ ಸ್ಥಿತಿಗಿಂತ ಅವರ ಸ್ಥಿತಿ ಕಡಮೆ ಇರಲಿಲ್ಲ. ಅವರು ಕಮಲೆಯನ್ನು ಬಿಟ್ಟು ಹೋಗುವುದೇ ತಡ, ತಾಯಿಯನ್ನು ಆಕೆಯು ಗಟ್ಟಿಯಾಗಿ ಅಪ್ಪಿಕೊಂಡಳು. ಅಂಜಿಕೆಯಿಂದ ಕಾಲು ಗಳು ಥರಥರನೆ ನಡುಗ ತೊಡಗಿದವು. ಎದೆ ಹಾರತೊಡಗಿತು ಆಗ ಇಬ್ಬರೂ ಕೂಡಿ ಮನವಾರೆ ಅತ್ತರು. "ಅನಾಥರಾದ ಹೆಣ್ಣು ಮಕ್ಕಳಿಗೆ ರೂಪವನ್ನೇಕೆ ಕೊಡುವಿ ದೇವಾ!" ಎಂದುಕೊಂಡರು. "ನೀ ಕೊಟ್ಟ ಈ ಅಮೃತವು ನಮಗೆ ಕಾಳಕೂಟ ವಿಷವಾಗಿಹು ದಲ್ಲಾ!!" ಎಂದರು. ಅಂತೂ ಆ ರಾತ್ರಿಯು ದೇವನ ಮುಂದೆ ಅವರ ದುರ್ದೈವವನ್ನು ತೋಡಿಕೊಳ್ಳುವುದರಲ್ಲಿ ಹೋಯಿತು.

ಹೊಟ್ಟೆಯ ಚಿಂತೆಗಿಂತ ಆಸರದ ಅಗತ್ಯವು ಅವರಿಗೆ ಬಹಳ ಮಹತ್ವದ್ದಾದ್ದರಿಂದ "ಹೊಟ್ಟೆಗಿಲ್ಲದಿದ್ದರೂ ಚಿಂತೆಯಿಲ್ಲ. ಯಾರಾ ದರೊಬ್ಬ ಸಾತ್ವಿಕ ಮನುಷ್ಯರ ನೆರವು ನಮಗೆ ಸಿಗಬಹುದೆ?" ಎಂದು ಆಶಿಸಿದರು. ಇಂಥ ಆಶಿಸಿದ ದಿನಗಳು ಎಷ್ಟೋ ಕಳೆದು ಹೋದವಷ್ಟೇ ಅಲ್ಲ, ಅವರಲ್ಲಿ ನಿರಾಶೆಯು ಮನೆಯನ್ನೂ ಕಟ್ಟಿತು. ನಿರಾಶೆಯು ಮನೆಕಟ್ಟುತ್ತಿದ್ದರೂ ಸಿಕ್ಕವರಿಗೆ ಕೇಳಿನೋಡುವ ಕೆಲಸ ವನ್ನು ತಾಯಿ ಬಿಟ್ಟರಲಿಲ್ಲ. ಎಲ್ಲರಿಗೂ ಕೇಳುವಂತೆ ತಾನು ಕೆಲ ಸಕ್ಕೆ ಹೋಗುತ್ತಿದ್ದ ಹೋಟೇಲದ ಯಜಮಾನನಿಗೆ ತಮ್ಮ ಎಲ್ಲ

ಸಂಗತಿಯನ್ನು ಹೇಳಿ "ನಮಗೆ ಎಲ್ಲಿಯಾದರೂ ಒಳ್ಳೆಯವರ ನೆರೆಯನ್ನು ದಯಪಾಲಿಸಿರಿ" ಎಂದು ಬೇಡಿಕೊಂಡಳು. ಅವರು ಕರುಣೆಯ ಕತೆಯನ್ನು ಕೇಳಿ "ನಮ್ಮ ಹೋಟೇಲದ ಮಗ್ಗುಲಲ್ಲಿರುವ ನಮ್ಮ ಕೋಣೆಯಲ್ಲಿಯೇ ಇದ್ದು ಬಿಡಿರಿ" ಎಂದು ಅವಳಿಗೆ ಆತನು ಆಶ್ವಾಸನವನ್ನಿತ್ತನು.

ತಾಯಿಯು ಹೋಟೇಲಿನಲ್ಲಿ ಕೆಲಸಮಾಡುತ್ತಿದ್ದರೂ ಕಮಲೆ ಮಾತ್ರ ಬೇರೊಂದೆಡೆಗೆ ಬೇಳೆಯನ್ನು ಒಡೆಯುವುದಕ್ಕೆ ಹೋಗುತ್ತಿದ್ದಳು. ಕೆಲಸಕ್ಕೆ ಹೋಗುವಾಗ ಯಾವಾಗ ನೋಡಿದ್ದನೋ ಯಾರಿಗೆ ಗೊತ್ತು—ಕಮಲೆಯನ್ನು ಹೋಟೇಲದ ಮಾಲಕನು. ಆಕೆಯ ರೂಪಕ್ಕೆ ಮರುಳಾಗಿ ಕೆಲಸಕ್ಕೆ ಹೋಗುವಾಗಲೂ, ತಿರುಗಿ ಬರುವಾಗಲೂ ಅದೇ ಸ್ಥಳದಲ್ಲಿ ನಿಂತು ಅವಳನ್ನು ಮಿಕಿ ಮಿಕಿ ನೋಡಲು ಸುರುಮಾಡಿದನು. ಒಂದೆರಡು ಸಾರೆ ಅನುಭವ ಹೊಂದಿದ ಕಮಲೆಗೆ ಒಮ್ಮೆಲೆ ಸಂಶಯ ಬಂದು ಬಿಟ್ಟಿತು. ಗಾಬರಿಯಾದಳು. ಎದೆಯೊಡೆದು ನೀರಾಯಿತು. ರಾತ್ರಿಯಲ್ಲಿ ಅದನ್ನೆಲ್ಲಾ ತಾಯಿಗೆ ಹೇಳಿದಳು. ತಾಯಿಯೂ ಗಾಬರಿಯಾದಳು. "ಇನ್ನಾರಿಗೆ ಶರಣು ಹೋಗುವುದು?" ಅಂದುಕೊಂಡಳು. "ಭೂದೇವಿಯು ಕಾಲಿಟ್ಟ ಸ್ಥಳವನ್ನೇ ನುಂಗುತ್ತಿರುವಾಗ ಇನ್ನೆಲ್ಲಿ ಕಾಲಿಡೋದು?" ಅಂದಳು. "ಇನ್ನಾರು ದಿಕ್ಕು" ಎಂದು ರೋದಿಸಿದಳು.

ಈಗ ಮತ್ತೆ ಹಿಂದಿನ ಕಷ್ಟೆಲ್ಲಾ ಏಳತೊಡಗಿತಲ್ಲದೆ ಮುಂದಿನ ಕಾಳ ರಾತ್ರಿಯೂ ಅವರಿಗೆ ಕಾಣಿಸತೊಡಗಿತು. "ಹೀಗೇ ಸಾಗಿದರೆ ಅಬಲೆಯರಾದ ನಮ್ಮ ಗತಿಯೇನು?" ಎಂದು ಅವರ ಎದೆಯೊಡೆದು ಹೋಯಿತು. "ತಾಯಿ! ನನ್ನಂಥ ಪಾಪಿಯಾದ ಮಗಳನ್ನು ಹಡೆದು ಏನು ಸುಖ ಹೊಂದಿದೆಯಮ್ಮಾ! ಮುಪ್ಪಿನ ಕಾಲದಲ್ಲಿ ಸುಖಕ್ಕೆ ಬದಲಾಗಿ ದುಃಖವನ್ನೇ ಕೊಡುತ್ತಿರುವೆನಲ್ಲಾ!! ನಿನಗಿಷ್ಟೆಲ್ಲಾ ದುಃಖಕೊಟ್ಟು ನಾನು ಜೀವಿಸುವದಕ್ಕಿಂತ ದೇವರು ಬೇಗನೆ

ಕಣ್ಣನ್ನೇಕೆ ಮುಚ್ಚಿಸಲೊಲ್ಲ!!!'' ಎಂದು ಕಮಲೆಯು ಪರಿಪರಿಯಾಗಿ ಅಳತೊಡಗಿದಳು. ಆಕೆ ಅಳುವಷ್ಟು ತಾಯಿಗೆ ಚಿಂತೆ ಹೆಚ್ಚ ತೊಡಗಿತು.

ಇದೇ ಚಿಂತೆಯಲ್ಲಿಯೇ ಕಡೆಗೆ ಕೆಲದಿನಗಳ ಮೇಲೆ ತಾಯಿ ತೀರಿಹೋದಳು. ಆಗಿನ ಕಮಲೆಯ ದುಃಖ ಹೇಳಿ ತೀರಿಸಲಿಕ್ಕಾಗದು. ತನ್ನ ರಕ್ಷಣೆ, ತನ್ನ ಮಾನದ ರಕ್ಷಣೆ, ಎಳೆಮಗು ಸಾವಿತ್ರಿಯ ರಕ್ಷಣೆ, ಇಷ್ಟೆಲ್ಲಾ ಭಾರವನ್ನು ಅವಳ ಮೇಲೆ ಹೊರಿಸಿ ಕಾಡ ಮೃಗಗಳ ಮಧ್ಯದಲ್ಲಿ ಆಕೆಯನ್ನು ಬಿಟ್ಟುಕೊಟ್ಟು ತಾಯಿ ತನ್ನ ಪವಿತ್ರವಾದ ದೇಹವನ್ನು ಆ ಪಾಪಿಗಳ ದೃಷ್ಟಿಯಿಂದ ಮರೆಮಾಡಿಕೊಂಡಳು.

ಮರುಭೂಮಿಯಲ್ಲಿ ಹಾದಿ ತಪ್ಪಿ ದಿಕ್ಕಿಲ್ಲದೆ ಬಳಲುವ ಹಕ್ಕಿಗಿಂತ ಕಮಲೆಯ ಸ್ಥಿತಿ ಹೀನವಾಯಿತು. ''ಇನ್ನೆಲ್ಲಿ ಆಶ್ರಯಿಸಲಿ?'' ಎಂದು ಹಲುಬಿದಳು. ಮೇಲೆ ಆ ಹದ್ದು ಮಾಲಕನ ಅಂಜಿಕೆಯೊಂದು ಯಾವಾಗಲೂ ಅವಳನ್ನು ಘಾಸಿಗೊಳಿಸುತ್ತಿತ್ತು. ಅಂಜಿದಲ್ಲಿಯೇ ಹೊತ್ತು ಮುಳುಗಿದಂತೆ ಅವಳ ಮನಸ್ಸನ್ನೊಲಿಸಿಕೊಳ್ಳಲು ಆ ಕಾಮಾಂಧ ಮಾಲಕನ ವಕೀಲರು ಒಬ್ಬೊಬ್ಬರಾಗಿ ಬರತೊಡಗಿದರು. ಹಲವು ಪದಾರ್ಥಗಳ ಆಶೆಯನ್ನು ತೋರಿಸತೊಡಗಿದರು. ಸವಿಸವಿಯಾದ ಮಾತುಗಳಿಂದ ಅವಳನೊಲಿಸಲು ಹವಣಿಸಿದರು. ಆ ದುಷ್ಟರಿಗೆ ಆ ದುಃಖದ ಪರಿವೇಸು? ಕಡೆಗೆ ಸಹಜವಾಗಿ ತನ್ನಾಧೀನಕ್ಕೆ ಬರುವಂತೆ ನಾಲ್ಕೂನಿಟ್ಟಿನಿಂದ ಬಂಧನವನ್ನು ಮಾಡಿಟ್ಟರು. ಹತಭಾಗ್ಯಳಾದ ಕಮಲೆಯು ನಿರ್ವಾಹವಿಲ್ಲದೆ ಅವನ ಅಧೀನಳಾಗಬೇಕಾಯಿತು. ಅವಳ ದುರ್ದೈವದ ಪರದೆಯು ಇನ್ನೊಮ್ಮೆ ತೆರೆದು ಈಗ ಅವಳ ಸರ್ವಸ್ವವನ್ನೆಲ್ಲಾ ಹಾಳುಗೆಡಿಸಿತು.

ಆ ದುಷ್ಟನ ಪಾಪದ ಪಾತ್ರೆಯು ತುಂಬಲಿಕ್ಕೆ ಅವಳಲ್ಲಿಮಾಡಿದ ಅನ್ಯಾಯವೇ ಕಾರಣವಾಯಿತೆಂದು ಕಾಣುತ್ತದೆ. ಇದಾದ ಕೆಲ

ದಿನಗಳಲ್ಲಿಯೇ ಯಾವುದೋ ಬೇನೆಯಿಂದ ಕೊಳೆತು ಕೊಳೆತು ಆತನು ಸತ್ತುಹೋದನು. ಈಗ ಮತ್ತೆ ಬೈಲಿಗೆ ಬಿತ್ತು ಹಕ್ಕಿ. ಒಡನೆಯೇ ಹೊಟ್ಟೆಯ ಚಿಂತೆಯೂ ವ್ಯಕ್ತವಾಯಿತು. ಕಾಯಕವನ್ನು ಮಾಡಿ ಸಂರಕ್ಷಿಸಿದ ದೇಹವು ಈಗ ಕಾಯುವನ್ನು ದುಡಿಸಿ ಹೊಟ್ಟೆಹೊರಕೊಳ್ಳುವ ಹೊತ್ತು ಬಂದಿತು. ಎಲ್ಲಿಯಾದರೂ ದುಡಿದು ಹೊಟ್ಟೆಹೊರ ಕೊಳ್ಳಬಹುದಾಗಿತ್ತು. ಅದೇನೂ ದೊಡ್ಡಮಾತಲ್ಲ. ಆದರೆ "ಹದ್ದುಗಳ ಕಾಟ ತಡೆಯುವ ಬಗೆ ಹೇಗೆ? ಇದು ನನಗೆ ತಪ್ಪಿದ್ದಲ್ಲವಲ್ಲಾ!" ಇನ್ನೇನು ಮಾಡಬೇಕು?" ಎನ್ನುವ ವಿಚಾರವು ಅವಳನ್ನು ಗೊಂದಲದಲ್ಲಿ ಕೆಡವಿತು. ಎಷ್ಟು ವಿಚಾರಿಸಿದರೂ ಏನೂ ಬಗೆ ಹರೆಯಲಿಲ್ಲ. ಕಡೆಗೆ ಅದೇ ಕಾಯುವನ್ನು ಮಾರುವ ಕಾಯಕವನ್ನೇ ಹೂಡಿದಳು. ಅದಕ್ಕೆ ಬೇಕಾಗುವ ಗುಣಗಳನ್ನು ಕಲಿತುಕೊಳ್ಳಬೇಕಲ್ಲ ಅವನ್ನೂ ಕಲಿತುಕೊಂಡಳು.

ಅವಳ ಉದ್ಯೋಗವು ಭರದಿಂದ ನಡೆಯಿತು. ಅವಳಿಗಾಗ ವ್ಯಥೆಯಾಗುತ್ತಿರಲಿಲ್ಲವೆಂದೇನೂ ಅಲ್ಲ. "ಆಯ್ತು ಒಮ್ಮೆ ಕೆಟ್ಟೆ, ಕೆಟ್ಟ ಫಲವನ್ನು ತಿಪ್ಪೆಗೆ ಒಗೆಯದೆ ಏನು ಮಾಡೋದು?" ಎಂದು ಸಂತವಿಸಿಕೊಳ್ಳುತ್ತಿದ್ದಳು.

ನೋಡು ನೋಡುವುದರಲ್ಲಿ ಪ್ರಖ್ಯಾತ ನಾಯಿಕಿಣಿಯೆಂದು ಹೆಸರುಗೊಂಡನಂತರ ಎಷ್ಟೋ ಜನ ಧನಾಢ್ಯರು ಅವಳ ಸುತ್ತು ಸುಳಿಯ ತೊಡಗಿದರು. ಆಗ ಅವಳಿಗಾವುದರ ಕೊರತೆ? ದುಡ್ಡು, ಮನೆ, ಮೋಟಾರು ಎಲ್ಲಾ ಅವಳ ಕೈವಶ. ಆಳುಹೋಳುಗಳಿಗಂತೂ ಕೊರತೆಯಿಲ್ಲ. ವಸ್ತ್ರ ವಡವೆಗಳಿಗೆ ಮಿತಿಯಿಲ್ಲ.

ಇಷ್ಟೆಲ್ಲ ಐಶ್ವರ್ಯ ಅವಳ ಪದತಲಕ್ಕೆ ಬಂದಿದ್ದರೂ ಅವಳ ಮನದ ಕೊರಗು ಮಾಯುವಾಗಲಿಲ್ಲ. "ನನ್ನ ದುಷ್ಟ ಕಕ್ಕನು ನನ್ನನ್ನು ಕೆಡಿಸಿದನಲ್ಲಾ! ನಾನು ಪಾಪಿಯಾದೆನಲ್ಲಾ!!" ಎಂದು ಯಾವಾಗಲೂ ಮರುಗುತ್ತಿದ್ದಳು. "ನಾನು ಕೆಟ್ಟರೆ ಕೆಟ್ಟೆ.

ನನ್ನ ಸಾವಿತ್ರಿಯಾವರೂ ಸೌಭಾಗ್ಯವತಿಯಾಗಲಿ" ಎಂದು ಕೊಳ್ಳುತ್ತಿದ್ದಳು.

ಇಂದು ತನ್ನ ಮನದ ಬಯಕೆಯಂತೆ ಕಮಲೆಯು ಸುದ್ದಿ ಪತ್ರವೊಂದರಲ್ಲಿ ವರಶೋಧನಕ್ಕಾಗಿ ಒಂದು ಜಾಹಿರಾತವನ್ನೇ ಕೊಟ್ಟಳು. "ನನ್ನ ಕುಲಾಂಗನೆಯಾದ ಸಾವಿತ್ರಿಯನ್ನು ಮದುವೆ ಯಾದವರಿಗೆ ೨೫ ಸಾವಿರ ರೂಪಾಯಿಗಳನ್ನು ವರದಕ್ಷಣೆಯಾಗಿ ಕೊಡುತ್ತೇನೆಂದು" ಬರೆದಿದ್ದಳು.

ಆಗ ಆದೇ ನಾನು ವಕೀಲಿ ಪರೀಕ್ಷೆಯನ್ನು ಮುಗಿಸಿ ವಕಾಲತ್ತನ್ನು ಸುರುವುಮಾಡಿದ್ದೆ. ಈ ಸುದ್ದಿಯಾವುದೂ ನನಗೆ ಗೊತ್ತಿರಲಿಲ್ಲಿ. ಒಂದು ದಿನ ನಾಗಣ್ಣನು ಬಂದವನೇ ಬಂದು "ಒಂದು ಕೆಲಸವಿದೆ ನಡೆ" ಎಂದು ನನಗೆಂದನು. "ಏನು?" ಎಂದೆ ನಾನು "ಕೇಳಬಾರದು" ಎಂದನಾತನು. ಹೇಳಪ್ಪ ಹೇಳುವುದಾದರೂ ಹೇಳು" ಎಂದೆ. "ಏನಿಲ್ಲ ನಡೆ, ಹೇಳುತ್ತೇನೆ." ಎಂದನು. ಆಗ ನಿರ್ವಾಹವಿಲ್ಲದೆ ಬಟ್ಟೆಗಳನ್ನು ಧರಿಸಿಕೊಂಡು ಹೊರಟೆ.

ಎಡಬಲದಲ್ಲಿ ನಾಕಟ್ಟದ ಮನೆಗಳು ವಿರಾಜಿಸುತ್ತಿವೆ. ಸುತ್ತಲೂ ಉಪವನಗಳು ಅವುಗಳಿಗೆ ಮತ್ತಷ್ಟು ಶೋಭೆಯನ್ನು ತರುತ್ತಿವೆ. ಅದು ರಹದಾರಿಯಲ್ಲದ್ದರಿಂದ ಮೋಟಾರುಗಳ ಸಪ್ಪಳವಲ್ಲದೆ ಜನರ ಗದ್ದಲವು ಅಲ್ಲಿರಲಿಲ್ಲವಾದುದರಿಂದ ಗಭೀರತೆಯೂ ಅದಕೆ ತುಂಬಿದೆ. ಇಂಥ ಓಣಿಯೊಳಗಿಂದ ಹಾಯ್ದು ನಮ್ಮ ಮೋಟಾರವು ನಾಲ್ಕಟ್ಟದ ಒಂದು ಬಂಗಲೆಯ ಮುಂದೆ ಬಂದು ನಿಂತಿತು. ನಾವೆಲ್ಲಾ ಕೆಳಗಿಳಿಯುವುದರಲ್ಲಿಯೇ ಒಬ್ಬ ಆಳು ಬಂದು "ಹೀಗೆ ಬರಬೇಕು ಸ್ವಾಮಿ" ಎಂದು ಬಿನ್ನವಿಸಿಕೊಂಡನು. ಆ ಆಳನ್ನನುಸರಿಸಿ ನಾವೆಲ್ಲರೂ ಆ ಮನೆ ಹೊಕ್ಕೆವು.

ನೇರವಾಗಿ ಮನೆಹೊಕ್ಕವರು ಭವ್ಯವಾದದ್ದೊಂದು ನಡುಮನೆಗೆ ಹೋದೆವು. ನಮಗೆ ಪಡಿಹಾರಿಯಾದ ಆಳು ಅಲ್ಲಿರುವ

ಕುತನಿಯ ಖುರ್ಚಿಗಳ ಮೇಲೆ ಕೂಡ್ರಿಸಿ ಸರಿದು ನಿಂತನು. ಅಲ್ಲಿ ಹೋದೊಡನೆಯೇ ನಾವೆಲ್ಲಿ ಬಂದೆವೆಂಬ ಸ್ಮೃತಿಯೇ ನಮಗೆ ಹಾರ ಬಹುದಾಗಿತ್ತು. ಅಷ್ಟುಮಾತ್ರವಾಗದೆ ಬೆಪ್ಪಾಗಿ ಕುಳಿತು ಬಿಟ್ಟೆವು. ಅಲ್ಲಿ ಹಾಸಿದ ರತ್ನಕಂಬಳಿಯ ಸೊಬಗು, ಇಟ್ಟ ಖುರ್ಚಿಗಳ ಠೀವಿ, ನಕ್ಷೆಯ ಮೇಜುಗಳ ಬೆಡಗು, ಅವುಗಳ ಮೇಲೆ ಸಿಂಗರಿಸಿಟ್ಟ ಗೊಂಬೆ ಗಳ ಸೌಂದರ್ಯ, ಬೆಳ್ಳಿಯ ಸುಳುವುಗಳಿಂದ ಶೋಭಿಸುವ ವಸ್ತುಗಳು ಎಲ್ಲಾ ಬೆರಳು ಕಚ್ಚುವಂಥವುಗಳೆ. ಇನ್ನು ಗೋಡೆಯ ಹೊಳಪು, ಅವುಗಳ ಮೇಲೆ ತೂಗಬಿಟ್ಟ ತಸಬೀರುಗಳ ನಯನಾನಂದ ಕರ ಇವುಗಳದಂತೂ ವರ್ಣಿಸಲಿಕ್ಕೇಬಾರದು. ಒಟ್ಟಿನ ಮೇಲೆ ಆ ಮನೆಯು ರಾಜಭವನಕ್ಕೆ ಸರಿಗಟ್ಟುತ್ತಿತ್ತೆಂದು ಹೇಳುವುದಕ್ಕಿಂತ ರಾಜಭವನವನ್ನು ಹೀಯಾಳಿಸುತ್ತಿತ್ತೆಂದು ಹೇಳಿದರೇ ಹೆಚ್ಚು ಸಯು ಕ್ತಿಕವೆಂದು ತೋರುತ್ತದೆ. ಇದೆಲ್ಲಾ ನೋಡಿ ಮನಸ್ಸಿನಲ್ಲಿ ವಿಚಾರ ಗಳ ಕಾಕಲಾಟಕ್ಕೆ ಸುರುವಾಯಿತು. "ಇಂಥ ಶ್ರೀಮಂತರ ಸಂಬಂಧವು...............ನನ್ನಂಥ ಬಡವನೊಡನೆ.................. ಕೂಡಬಹುದೇ ?...............ನೀನು ವಕೀಲನಾದರೇನಾಯಿತು.... ...............ವಕೀಲಿಯ ಉತ್ಪನ್ನವಾದರೂ ಏನಿದೆ ನನ್ನದು ?" ಎಂದು ಮೊದಲಾಗಿ ತೆರೆಗಳೇಳ ಹತ್ತಿದುವು ತಲೆಯಲ್ಲಿ. ಆಗ ಅಲ್ಲಿ ಹಚ್ಚಿಟ್ಟ ಊದುಬತ್ತಿಗಳ ಸುವಾಸಿಕ ಹೊಗೆಯು ಸುತ್ತೆಲ್ಲ ಸುಳಿ ದಾಡಿ, ಮೂಗನ್ನು ಮುಟ್ಟಿ, ಗಲ್ಲಗಳನ್ನು ತಟ್ಟಿ ಹೋಗುತ್ತಿದ್ದರೂ ಏನನ್ನೂ ಅರಿಯದೆ ಇದ್ದೆ.

ಇಷ್ಟರಲ್ಲಿ ಕಮಲೆಯು ಬಿಳಿಯ ಜರದಂಚಿನ ಸೀರೆಯನ್ನುಟ್ಟು ಕೊಂಡು ಸಾವುಕಾಶವಾಗಿ ಬಂದು "ಇದೇ ಬಂದಿರಷ್ಟೆ ?" ಎಂದು ಮೆತ್ತಗಾಗಿ ಕೇಳಿ ಒದಿಯ ಖುರ್ಚಿಯ ಮೇಲೆ ಕೂತುಕೊಂಡಳು. ನಾಗಣ್ಣನ ಹೌದು ಎಂದುತ್ತರಬರುವುದಕ್ಕಿಂತಲೇ ಮೊದಲು "ನಿಮ್ಮ ಸ್ವಾಗತಕ್ಕಾಗಿ ನಾನಿರಲಿಲ್ಲ ಕ್ಷಮಿಸಿ." ಎಂದು ಮಧುರವಾಗಿ ಮತ್ತೊಂದು ಧ್ವನಿ ಹೊರಡಿಸಿದಳು. "ಹೌದು" "ಕ್ಷಮಿಸಲಿಕ್ಕೆ

ಅದಾವ ದೊಡ್ಡ ಮಾತು" ಎಂದು ಎರಡಕ್ಕೂ ಒಮ್ಮೆಲೇ ಉತ್ತರ ಹೇಳಿ ತಣ್ಣಗಾದ ನಾಗಣ್ಣ.

ನಾಗಣ್ಣನ ಮಾತು ಮುಗಿಯುವುದರಲ್ಲಿಯೇ ಚಟಕ್ಕನೆ ಆಕೆ ಎದ್ದು ಕಿಡಿಕಿಯಲ್ಲಿ ಮೋರೆ ಹಾಕಿದಳು. ಮೋರೆಹಾಕುವುದೇ ತಡ ಫಿರಕ್ಕನೇ ಸರಿದು ಬಂದು ಮೇಜಿನ ಮೇಲಿಟ್ಟ 'ಬೆಲ್ಲ'ನ್ನೂ ಬಾರಿಸಿದಳು. ಆಯ್ತು ಇನ್ನೂ ಏನೇನೋ ದೃಶ್ಯಗಳು ಕಂಡವು ಎಲ್ಲಾ ನೊಡುತ್ತಲೇನೇ ಇದ್ದೆ.

ತನ್ನೆಲ್ಲಾ ಕೆಲಸಗಳನ್ನು ಮುಗಿಸಿಕೊಂಡು ಮತ್ತೆ ಬಂದು ಕುಳಿತಳು. ಇಷ್ಟೊತ್ತಿನವರೆಗೂ ಆವಳ ಮುಖದ ಕಡೆ ಕಣ್ಣಿಡಲು ಧೈರ್ಯಮಾಡದ ನಾನು ಒಂದಿಷ್ಟು ಈಕ್ಷಿಸಿ ನೋಡಲು ಈಗ ಸಾಹಸಮಾಡತೊಡಗಿದೆ ನೋಡಿದೆ. ಮತ್ತೆ ನೋಡಿದೆ. ತಿರು ತಿರುಗಿ ನೋಡಿದೆ. ಎಲ್ಲೋ ಒಮ್ಮೆ ಆವಳ ಮುಖವನ್ನೂ ಕಂಡಂತಾಯ್ತು. "ಎಲ್ಲಿ ಇವಳನ್ನು ನೋಡಿರಬೇಕು" ಎಂದು ತಲೆಯಲ್ಲಿ ಒಂದು ಕಡೆ ಗೊಂದಲ. ನಮ್ಮ ಉಪಚಾರಕ್ಕೆ ಗಂಡಸರಾರು ಬಾರದೆ ಇವಳೇಕೆ ಬಂದಿದ್ದಾಳೆ? ಈ ಮನೆಯಲ್ಲಿ ಗಂಡಸರಾರೂ ಇದ್ದಿರಲಿಕ್ಕಿಲ್ಲವೆ?" ಎಂದು ಮತ್ತೊಂದು ಕಡೆ ಗೊಂದಲ. ಹೀಗೆ ಈ ಗೊಂದಲದಲ್ಲಿಯೇ ಬಿದ್ದು ನಾನು ತೊಳಲಾಡಿಸಿದೆ.

ನನ್ನ ತೊಳಲಾಟದ ಗೊಂದಲದಲ್ಲಿ ನಾನಿರುವಾಗ ಗೆಳೆಯರು ಕಮಲೆಯೊಡನೆ ಏನು ಮಾತಾಡಿದರೊ ನಾನರಿಯೆ. ಆಯ್ತು ಏನೇನೋ ಮಾತಾಡಿದರು. ಇಷ್ಟು ಮಾತ್ರ ಹೇಳಬಲ್ಲೆ. ಆವಳ ಹಾವಭಾವ, ಮಾತಾಡುವ ಠೀವಿ, ವೈಯಾರ ಎಲ್ಲಾ ನೋಡಿದರೆ 'ಇವಳೇನೋ ಮಾನವಂತಕ ಮನೆಯ ಹೆಣ್ಣಲ್ಲಾ' ಎಂದೆನಿಸತೊಡಗಿತು. ಎಲ್ಲೋ "ನೋಡಿದಂತಿದೆ" ಎಂಬ ಮಾತು 'ಇವಳು ವೇಶ್ಯೆ ಏನಾದರೂ ಇರಬೇಕೆ?' ಎಂಬ ಸಂಶಯಕ್ಕೆ ಕಾರಣವಾಗತೊಡಗಿತು. "ವೇಶ್ಯೆಯಾದರೆ ಸನ್ನ ಗೆಳೆಯರೇಕೆ ಇಲ್ಲಿ ಬಂದಾರು.

ನನ್ನನ್ನು ಇಲ್ಲಿಗೇಕೆ ಕರತಂದಾರು'' ಎಂದಂದುಕೊಂಡು ನನ್ನ ಸಂಶಯವನ್ನು ಒಂದಿಷ್ಟು ಸರಿಸಿಟ್ಟೆ.

ಒಮ್ಮೆಲೆ ಏನೋ ಸಪ್ಪಳ ಕೇಳಿಸಿದಂತಾಯ್ತು. ಎಲ್ಲರ ದೃಷ್ಟಿಗಳು ಬಾಗಿಲ ಕಡೆಗೆ ಹೊರಳಿದಂತೆ ನನ್ನ ದೃಷ್ಟಿಯೂ ಹೊರಳಿತು. ನೋಡಿವೆ, ಯಾರೋ ಒಬ್ಬ ಹೆಣ್ಣುಮಗಳು ಬರುವಂತೆ ಕಾಣಿಸಿತು. ಅವಳು ಕಮಲೆಯ ತಂಗಿಯಾದ ಸಾವಿತ್ರಿ ನೆಟ್ಟಗೆ ಬಂದೇಬಿಟ್ಟಳು. ಹದಿನಾಲ್ಕು ವರುಷದ ಹುಡಿಗಿ, ಕೈಯಲ್ಲಿ ಏನೋ ಹಿಡಿದುಕೊಂಡು ಬಂದವಳೇ ಮೇಜಿನಮೇಲಿಟ್ಟು ಎಲ್ಲರಿಗೂ ನಮಿಸಿದಳು. ನಮಿಸಿದವಳೇ ಲಜ್ಜೆಯಿಂದ ತಲೆಬಾಗಿ ಒಂದೆಡೆಗೆ-ಸರಿದು ನಿಂತಳು. ನೆಲವನ್ನು ನೋಡುತ್ತ ಕಾಲುಬೆರಳಿನಿಂದ ನೆಲವನ್ನು ಬರೆಯತೊಡಗಿದಳೆಂದು ನಾನೇನೂ ಹೇಳಬೇಕಾಗಿಲ್ಲ. ಅದು ಹೆಣ್ಣು ಮಕ್ಕಳ ಸಹಜ ಸ್ವಭಾವ.

"ಏನಮ್ಮಾ! ಏನು ಕಲಿಯುತ್ತಿ?" ಎಂದು ಸಾವಿತ್ರಿಗೆ ನಾಗಣ್ಣನು ಕೇಳಿದನು. ಇದಕ್ಕವಳು ಉತ್ತರವೇನೂ ಹೇಳದೆ ತಗ್ಗಿಸಿದ ಮೋರೆಯನ್ನು ಅಲ್ಲೇ ಅಲುಗಿಸಿ ಸೆರೆಗಂಚನ್ನು ಹಿಡಿದು ಎಳೆಗಳನ್ನು ಎಣಿಸಹತ್ತಿದ್ದಳು. ತಲೆಯನ್ನು ಅಲುಗಿಸಿದಾಗ ನಗೆಯ ಮೊಗ್ಗೆಯು ಸ್ವಲ್ಪ ಅರಳಿರಬೇಕೆಂದು ನಾನು ಭಾವಿಸುತ್ತೇನೆ.

"ಯಾಕಮ್ಮಾ ಮೌನವೇಕೆ? ಹೇಳು, ನಾಚಬೇಡ ಹೇಳು." ಎಂದು ಮತ್ತೆ ಕೇಳಿದನು. ಆದರೂ ಉತ್ತರವಿಲ್ಲ.

"ಹೇಳು ಸಾವಿತ್ರಮ್ಮಾ ನಾಚಬೇಡ ಹೇಳು." ಎಂದು ಹತ್ತಿರದಲ್ಲಿಯೇ ಕುಳಿತ ಆಕೆಯ ಪ್ರೀತಿಯ ಅಕ್ಕ ಬೆನ್ನಮೇಲೆ ಕೈಯಾಡಿಸಿ ಅಂದಳು.

ಈಗ ಆಕೆಯ ಉತ್ತರವು ನಾಲಿಗೆಯ ರಂಗಮಂಚಕ್ಕೆ ಬಂದು ನೆಲೆದಾಡುತ್ತಿದ್ದರೂ ಧ್ವನಿಯ ರೂಪನ್ನು ತಾಳಿ ಹೊರಬರಲಿಲ್ಲ. ಮತ್ತೂ ಒಂದಿಷ್ಟು ನಗಿಯನರಳಿಸಿ ತಲೆಯಲುಗಿಸಿತು ಅಷ್ಟೆ.

" ನೀನೇನೋ ಇಂಗ್ಲೀಷು ಕಲಿಯುತ್ತೀಯಂತೆ. ಇಂಗ್ಲೀಷು ಕಲಿಯುವವರು ಇಷ್ಟು ನಾಚಬೇಕೇನೆ ಅಮ್ಮಾ?" ಎಂದು ಮತ್ತೆ ನಾಗಣ್ಣ ನುಡಿದನು. ಅದಕ್ಕೆ " ಇಂಗ್ಲಿಷು ಕಲಿತರೇನಾಯಿತು.... ..............." ಎಂದು ಏನೋ ಅಂದುಬಿಟ್ಟಳು. " ಹಾಗನ್ನ ಬಾರದಮ್ಮಾ, ಇವರು ಹಾದಿಗ್ಹೋಗುವ ಜನರಲ್ಲ. ಇವರು ನಿನ್ನನ್ನು ನೋಡಲಿಕ್ಕೆ ಬಂದಿದ್ದಾರೆ. ಅವರು ಕೇಳುವ ಪ್ರಶ್ನೆಗೆ ಸರಿಯಾಗಿ ಉತ್ತರ ಕೊಡಮ್ಮಾ ಮಗು!'' ಎಂದು ಕಮಲೆ ನಲ್ಮೆಯಿಂದ ಹೇಳಿದಳು.

ಹೀಗೆ ಏನೇನೋ ಮಾತುಗಳು ನಡೆದಿದ್ದರೂ ನನ್ನ ಲಕ್ಷ್ಯ ವೆಲ್ಲಾ "ಇವರ್‍ಯಾರಿರಬೇಕು?'' ಎನ್ನುವುದರ ಕಡೆಗೇ ಇತ್ತು. " ಇವಳು ವೇಶ್ಯೆ ಇರಲಾರಳಷ್ಟೆ? ಗೆಳೆಯರನ್ನು ವಿಚಾರಿಸದೆ ನಾನೇಕೆ ಇಲ್ಲಿಗೆ ಬಂದೆ?" ಎಂದು ಎಷ್ಟೋ ತರಂಗಗಳು ತಾಕಲಾಡ ತೊಡಗಿದವು. ನಾಗಣ್ಣನಿಗೆ ಸ್ವಲ್ಪತಟ್ಟಿ "ಇವರ್‍ಯಾರು?" ಎಂದು ಪಿಸುಮಾತಿನಲ್ಲಿ ಕೇಳಿದೆ. "ಯಾರಿದ್ದರೇನು? ಮಿಶ್ರವಿವಾಹಕ್ಕೆ ಒಪ್ಪಿಗೆ ಇದ್ದಮೇಲೆ ಯಾರಿದ್ದರೂ ಅಷ್ಟೆ.'' ಎಂದನು. ಆಗ ನನ್ನ ಸಂಶಯವು ದ್ವಿಗುಣಿತವಾಯಿತು.

ನಾನು ನಾಗಣ್ಣನಿಗೆ ಏನೋ ಕೇಳಿದ್ದೂ ನಾಗಣ್ಣನು ಕೊಟ್ಟ ಉತ್ತರದಿಂದ ನನ್ನ ಭಾವದಲ್ಲಿ ಬದಲಾವಣೆಯಾದದ್ದೂ ನೋಡಿ ಅವಳ ರಂಗವೇ ಬೇರೆಯಾಯಿತು. ಏನೋ ಮಿಕಿ ಮಿಕಿ ನನ್ನ ಕಡೆಗೊಮ್ಮೆ ನಾಗಣ್ಣನ ಕಡೆಗೊಮ್ಮೆ ನೋಡತೊಡಗಿದಳು. ಅವಳು ಬಲು ಜಾಣೆ. ಹೀಗೆ ಒಂದೆರಡುಸಾರೆ ಕಣ್ಣು ಹೊರಳಿಸಿ ನೋಡುವುದ ರಲ್ಲಿಯೇ ನನ್ನ ಇಂಗಿತವನ್ನು ಕಂಡುಕೊಂಡಳು. ಆಗ ಮೋರೆ ಸಪ್ಪಗಾಗಿ ಅವಳ ಕಣ್ಣೀರಿನ ಮಳೆಯಿಂದ ತಂಪಾದ ವಾತಾವರಣವು ನನ್ನ ಹೃದಯ ವೇದಿಕೆಯನ್ನು ಶೀತಲಗೊಳಿಸದೆ ಇರಲಿಲ್ಲ.

"ನಾನು ಕೆಟ್ಟರೇನಾಯಿತು ಸ್ವಾಮಿ! ನನ್ನ ತಂಗಿಯೇನಾದರೂ ಕೆಟ್ಟಿದ್ದಾಳೆಯೇ ಅವಳು ಅಚ್ಚ ಬ್ರಾಹ್ಮಣ ಕನ್ನೆಯೇ ಇದ್ದಾಳೆ. ನನ್ನ ಸರ್ವಸ್ವವನ್ನೆಲ್ಲಾ ನಿಮಗೆ ಧಾರೆ ಎರೆಯುವೆನು ಅವಳನ್ನು ಮದುವೆ ಮಾಡಿಕೊಳ್ಳಿರಿ. ನಾನೇನೋ ಪಾಪಿ! ಪತಿದೇವನನ್ನು ಈ ಜನ್ಮದಲ್ಲಿ ಕಾಣಲಿಲ್ಲ. ಅವನನ್ನು ನನ್ನ ಹೃದಯದೊಳಗಿಟ್ಟು ಪೂಜಿಸಲಿಲ್ಲ. ಅವನ ದಾಸಾನುದಾಸಳಾಗಿ ನನ್ನ ಶರೀರವನ್ನು ಸವಿಸಲಿಲ್ಲ. ನನ್ನ ಕಕ್ಕ ಮಾಡಿದ ಪಾಪಕ್ಕಾಗಿ ಹೀಗೆ ಇನ್ನು ಏಸು ಜನ್ಮಗಳನ್ನು ಕಳೆಯುವನೋ ನಾನರಿಯೆ. ನನ್ನ ಈ ಹಾದಿಯನ್ನೇ ಅವಳಿಗೆ ಹಚ್ಚಬೇಡಿರಿ. ಶರೀರವನ್ನು ಮಾರಿಗಳಿಸಿದ ದುಡ್ಡಿನ ಸುಖವು ಪತಿಯ ಪ್ರೇಮದ ಮುಂದೆ ಬೀಳಸೊಪ್ಪು. ಗುಡಸಲಿನಲ್ಲಿ ಕೋರಿಯನ್ನು ಹೊತ್ತು ಜೀವಿಸುವ ನಲ್ಮೆಯ ಪತಿಯೊಡನೆ ಪ್ರಪಂಚ ಮಾಡುವ ಗರತಿಯು ನನಗಿಂತ ಸಾವಿರ ಪಟ್ಟು ಸುಖವನ್ನನುಭವಿಸುವಳು. ಆದುದರಿಂದ ನನ್ನ ತಂಗಿಗೆ ಪತಿಯಾಗಿ ಕಾಪಾಡಿರಿ. ಬೇಡಿದಷ್ಟು ದುಡ್ಡನ್ನು ವರದಕ್ಷಿಣೆಯಾಗಿ ಕೊಡುವೆನು ಸುಶಿಕ್ಷಿತರಾದ ನೀವು ಅಧಃಪಾತಕ್ಕಿಳಿಯುವ ನಮನ್ನು ಉದ್ಧರಿಸದಿದ್ದರೆ ಮತ್ತಾರು ಉದ್ಧರಿಸಬೇಕು? ಸ್ವಾರ್ಥಕ್ಕಾಗಿ ಕತ್ತಲೆಯಲ್ಲಿ ನಮ್ಮ ಕಾಲು ಬೀಳುವವರೆಷ್ಟೋ ಜನರಿದ್ದರೂ ಬೆಳಕಿನಲ್ಲಿ ಕರುಣೆಗಾಗಿ ಕೈಹಿಡಿದು ಕರೆಯುವವರೊಬ್ಬರನ್ನೂ ನಾನು ಕಾಣೆನು. ನನ್ನ ತಂಗಿಯು ಸುಶಿಕ್ಷಿತೆ ಇದ್ದಾಳೆ. ಪಾಪಿಯಾದ ನನ್ನೊಡನೆ ಇದ್ದದೊಂದೇ ಆಕೆಗೆ ಕಲಂಕ. ಅರಿತವರಾದ ನೀವಲ್ಲದೆ ಮತ್ತಾರೂ ಅವಳನ್ನು ಲಗ್ನವಾಗರು ಕರುಣಿಸಿ ಕಾಪಾಡಿರಿ. ಸೆರಗೊಡ್ಡಿ ಬೇಡಿಕೊಳ್ಳುವೆನು." ಎಂದು ಅನ್ನುತ್ತ ಬಿಕ್ಕಿ ಬಿಕ್ಕಿ ಅಳತೊಡಗಿದಳು.

ಇದನ್ನೆಲ್ಲಾ ಕೇಳಿ ಆಶ್ಚರ್ಯವಂತೂ ಸರಿಯೇ ಸರಿ, ಜೊತೆಗೆ ಕರುಣೆಯೂ ಬಂತು. ಅಲ್ಲದೆ "ಕಕ್ಕನು ಮಾಡಿದ ಪಾಪಕ್ಕೆ ಇನ್ನೂ ಏಸು ಜನ್ಮ ಹೀಗೆ ಕಳೆಯಬೇಕೊ!" ಎಂದು ತಗೆದ

ಉದ್ಗಾರವು "ಕಕ್ಕನ ಪಾಪವೇನು? ಅದಕ್ಕಾಗಿ ಇವಳು ಪಡುವ ಕಷ್ಟವೇನು?" ಎನ್ನುವ ಪ್ರಶ್ನೆಗೆ ಆಧಾರವಾಯಿತು. ಅಂತೂ ಇಂತು ವೃತ್ತಾಂತವನ್ನೇ ಕೇಳಿಬಿಡೋಣ ಎಂದುಕೊಂಡೆ.

ಇಲ್ಲಿಯವರೆಗೆ ತುಟಿಯನ್ನು ಪಿಟುಕಿಸದ ನಾನು "ನೀವಾಡುವ ಮಾತು ಕೇಳಿದರೇನೋ ಒಂದು ತರದ ಕರುಣೆ ಬರುತ್ತೆ. ನಾನೇನೋ ಮಿಶ್ರವಿವಾಹಕ್ಕೆ ಒಪ್ಪಿಕೊಂಡಿರುವೆನಾದರೂ..................ನಡೆ, ನೋಟ ಮೊದಲಾದವುಗಳನ್ನು ನೋಡಿ ಸಂಶಯ ಬಂದುದರಿಂದ ..............." ಎಂದು ಇನ್ನೂ ಮಾತು ಮಾತಾಡುವುದರಲ್ಲಿಯೇ "ಹೌದು ಸ್ವಾಮಿ! ಹೊಟ್ಟೆಯುರಿಯು ಈ ಕೆಟ್ಟ ಗುಣಗಳನ್ನೆಲ್ಲಾ ಕಲಿಸಿತು. ಅವುಗಳನ್ನು ಬಿಡಬೇಕಾದರೂ ಅವು ನನ್ನನ್ನೀಗ ಬಿಡದಾಗಿವೆ. ಕ್ಷಮಿಸಬೇಕು ಎಂದು ಸಾವಕಾಶವಾಗಿ ನುಡಿದಳು.

ಇದನ್ನೆಲ್ಲಾ ಕೇಳಿದರೆ ನಿಮ್ಮ ಇತಿ ವೃತ್ತಾಂತವನ್ನೇ ಕೇಳಬೇಕೆನಿಸುತ್ತದೆ. ಹೇಳಲು ಅಡ್ಡಿ ಇರದಿದ್ದರೆ ಹೇಳಿ ಬಿಡುವಿರಾ?" ಎಂದು ಮತ್ತೆ ಪ್ರಶ್ನೆ ಮಾಡಿದೆ.

ಇದನ್ನು ಕೇಳಿ ಅವಳ ಬಿಗಿದ ಶಿರವು ಉಬ್ಬತೊಡಗಿತು. ಒಂದೇ ಸವನೇ ಬಿಕ್ಕಿ-ಬಿಕ್ಕಿ ಅಳತೊಡಗಿದಳು. "ಈ ಪಾಪಿಯ ಚರಿತ್ರೆ ಕೇಳುವಿರಾ?" ಎಂದು ಮತ್ತೆ ಮತ್ತೆ ಬಿಕ್ಕಿದಳು. ಅತ್ತಳು.

ಗುಲಗಂಜಿಯಂತಾದ ಕಣ್ಣುಗಳನ್ನೊರಿಸಿ, ಎದೆಯಿಂದ ತಲೆಯವರೆಗಿನ ಸೆರಗನ್ನು ತೀಡಿ ಸರಿಮಾಡಿಕೊಂಡು, ಹಣೆಯಮೇಲೆ ಹರಿದಾಡಲು ಹೊರಟ ಮುಂಗುರುಳನ್ನು ಹಿಂದಕ್ಕಟ್ಟುತ್ತ ನೊಂದ ಮನದಿಂದ ತನ್ನೆಲ್ಲ ಸಂಗತಿಯನ್ನು ಹೇಳಿದಳು. ಕಕ್ಕನು ಮಾಡಿದ ಅನ್ಯಾಯವನ್ನುಸುರಿ ಅವನ ಹೆಣದ ಮೇಲೆ ಕಲ್ಲೊಡೆದಳು. ಮುಂದೆ ಸಂಭವಿಸಿದ ಸಂಕಟವನ್ನು ತೋಡಿಕೊಂಡು ಅತ್ತಳು. ಕಡೆಗೆ "ಏನು ಹೇಳಲಿ, ನಾನು ಈ ಕೆಲಸಕ್ಕೆ ಬಿದ್ದಮೇಲೆ ಇಷ್ಟೆಲ್ಲ

ಐಶ್ವರ್ಯವು ನನ್ನ ಪದತಲದಲ್ಲಿ ಬಿದ್ದಿದೆ; ಇಷ್ಟೆಲ್ಲ ಕಾಮುಕರು ನನ್ನ ಕೈವಾರಿಗಳಾಗಿದ್ದಾರೆ; ಆದರೆ ಸ್ವಲ್ಪವೂ ನನಗೆ ಸುಖವಿಲ್ಲ. ಪವಿತ್ರ ವಂಶದಲ್ಲಿ ಹುಟ್ಟಿದ ನನ್ನ ತಂದೆ ತಾಯಿಗಳ ಹೆಸರಿಗೆ ಕಲಂಕ ತಂದೆನಲ್ಲಾ ! ನಲ್ಮೆಯ ಪತಿಯ ಅಕಳಂಕ ಪ್ರೇಮವನ್ನು ಈ ಜನ್ಮ ದಲ್ಲಿ ಕಾಣಲಿಲ್ಲವಲ್ಲಾ !! ಎಂದು ನನ್ನ ಹೃದಯವು ಒಂದೇ ಸವನೆ ಕೊರಗುತ್ತಿದೆ. ನೂರು ಜನ್ಮವಾದರೂ ಕಳೆಯಲಿ ಅಂಥ ಪ್ರೇಮದ ಒಂದು ಸವಿಯನ್ನು ಒಂದು ತೊಟ್ಟಾದರೂ ಸವಿಯಬೇಕೆಂದಿರುವೆ. ಅಂಥ ಸುದೈವವು ನನ್ನ ಜನ್ಮದಲ್ಲಿ ಇಲ್ಲ. ಇರದೇ ಹೋಗಲಿ. ಮುಂದಿನ ಜನ್ಮಕ್ಕಾದರೂ ಸಿಕ್ಕೀತು. ನನ್ನ ಪಾಪಿಯಾದ ಕಕ್ಕನು ಅಲ್ಲದೆ ನಮ್ಮನ್ನೆಲ್ಲಾ ಎಳೆದುಕೊಂಡು ನಡೆದ ಈ ಕುರುಡು ಸಮಾಜವು ಮಾಡಿದ ಈ ಅನ್ಯಾಯಕ್ಕಾಗಿ ಚಾತಕ ಪಕ್ಷಿಯಾಗಿ ಸಾವಿರಜನ್ಮ ವಾದರೂ ಕಳೆದು ಆ ಪ್ರೇಮವನ್ನು ಕಂಡುಕೊಳ್ಳುವೆ. ಆದರೆ........ ........ಈ ನನ್ನ ಮಗು? ನನ್ನ ಉಡಿಯಲ್ಲಿ ಹಾಕಿಹೋದ ನನ್ನ ತಾಯಿಯ ಮಗು !!—ನನ್ನ ತಂಗಿ !!! ಅವಳಿಗೂ ನನ್ನ ಉದ್ಯೋಗವನ್ನೇ ಹಚ್ಚಿ ಕೊಡಲಿ ? ಯಾವ ಪತಿಯ ಪ್ರೇಮವನ್ನು ಆಶಿಸಿ ನಾನು ಕಳವಳಿಸುವೆನೋ ಅಂಥ ಆ ಪತಿಯ ಪವಿತ್ರವಾದ ಪ್ರೇಮ ದಿಂದ ಅವಳನ್ನು ವಂಚಿತಳನ್ನಾಗಿ ಮಾಡಲಿಯಾ ? ಇಲ್ಲ ! ಇಲ್ಲ !! ನಾನೆಂದಿಗೂ ಅಂಥ ಕೆಲಸವನ್ನು ಮಾಡುವುದಿಲ್ಲ. ನನ್ನ ಎಲ್ಲ ಐಶ್ವರ್ಯ ಹೋದರೂ ಚಿಂತೆಯಿಲ್ಲ. ಆ ಪತಿ ದೇವನ ಪಾದತಲವು ಅವಳಿಗೆ ದೊರೆಯುವಂತೆ ಮಾಡುವೆನು. ಆದರೆ........ಆದರೆ........ ಯಾರು ಮಾಡಿಕೊಳ್ಳಬೇಕು ನನ್ನ ಸಾವಿತ್ರಿಯನ್ನು ? ಯಾವ ಮಹಾ ಪುರುಷನು ತನ್ನ ನಲ್ಮೆಯ ಸತಿಯನ್ನಾಗಿ ಮಾಡಿಕೊಂಡು ತನ್ನ ಪದತಲದಲ್ಲಿ ಸ್ಥಳ ಕೊಡುವನು ?" ಎಂದಂದು ಕಣ್ಣೀರು ಸುರಿಸುವಳು. ಶಿರ ಉಬ್ಬುವುದು. ಮತ್ತೆ ಮಾತನಾಡುವಳು "ಅಣ್ಣಾ ! ನನ್ನ ಸಾವಿತ್ರಿಗೆ ಪತಿಯಾಗಿ ನಿಮ್ಮ ಪಾದತಲದಲ್ಲಿ ಸ್ಥಳ ವನ್ನು ಕೊಡುವಿರಾ ? ನನ್ನ ಹೃದಯದ ನೋಟವನ್ನು ನಿವಾರಿಸು ವಿರಾ ? ನೀವಲ್ಲದೆ, ನಿಮ್ಮಂಥ ಸುಧಾರಕರಲ್ಲದೆ ಯಾರು ಲಗ್ನವಾಗ

ಬೇಕು ಆಕೆಯನ್ನು ?? ಹುದುಲಲ್ಲಿ ಬಿದ್ದು ಬಿದ್ದು ಹೊರಗೆ ಬರಲು ಆಶಿಸುವವರಿಗೆ ಕೈಯನ್ನು ಕೊಟ್ಟು ಕಡೆಗೆ ಕರೆದುಕೊಳ್ಳದೆ ಕಣ್ಣುಗ ಳಿಂದ ನೋಡಿ ಹಾಗೇ ಹೋಗುವಿರಾ? ಸೆರಗೊಡ್ಡಿ ಬೇಡಿಕೊಳ್ಳುವೆ. ಕರುಣಿಸಿರಿ, ಕರುಣಿಸಿರಿ. ನನ್ನ ಸಾವಿತ್ರಿಗೆ ಪತಿಯಾಗಿ.'' ಎಂದು ಅಳುತ್ತ ನನ್ನ ಮುಂದೆ ಬಿದ್ದು ಬಿಡುವಳು. ಆಗ ನಮಗೆಲ್ಲರಿಗೂ ಒಂದೇ ಸವನೇ ಕಣ್ಣೀರು ಸುರಿಯ ತೊಡಗಿದವು. ಅವಳ ಕರುಣ ಕತೆಯು ನಮ್ಮ ಹೃದಯವನ್ನು ಕರಗಿಸಿ ಬಿಟ್ಟಿತು. ಆಗ ನಾನವ ಳಿಗೆ ಹೀಗಂದೆ ;—

ಚಿಂತಿಸಬೇಡಮ್ಮಾ! ಚಿಂತಿಸಬೇಡ!! ಸತ್ಯವನ್ನೇ ನುಡಿದು ಸತ್ಯವನ್ನೇ ನಡೆದು ಉಪನಿಷತ್ತಿನ ಜಬಾಲಳಂತೆ ನೀನು ಬ್ರಾಹ್ಮಣ ಕನ್ನೆಯೇ ಆದಿ. ನಿನ್ನ ತಂಗಿಯೂ ಬ್ರಾಹ್ಮಣ ಕುವರಿ. ನಿನ್ನ ಕಕ್ಕ ಮಾಡಿದ ಪಾಪಕ್ಕಾಗಿಯೂ ಸಮಾಜವು ಮಾಡುವ ಅನ್ಯಾಯಕ್ಕಾ ಗಿಯೂ ನೀನಿಲ್ಲಿಯವರೆಗೆ ದುಃಖ ಭೋಗಿಸಿದಿ ಇನ್ನು ನಿನ್ನ ದುಃಖ ವನ್ನೆಲ್ಲಾ ನಾನು ಪರಿಹರಿಸುವೆ. ಸಮಾಜವು ಎಷ್ಟೇ ಈ ಅನ್ಯಾ ಯದ ಅಡ್ಡಿಯನ್ನು ಮಾಡಿದರೂ ಎಷ್ಟು ಮಾತ್ರವೂ ಲೆಕ್ಕಿಸದೆ ನಿನ್ನಚ್ಛೆಯಂತೆ ನಿನ್ನ ತಂಗಿಯನ್ನು ಲಗ್ನವಾಗುವೆನು. ಇಲ್ಲಿಯು ವರೆಗಿನ ನನ್ನ ವಿಚಾರವು ಮಿಶ್ರ ವಿವಾಹಕ್ಕೆ ಮುಟ್ಟಿತ್ತಾದರೂ ವೇಶ್ಯೆಯರನ್ನು ಲಗ್ನವಾಗಲು ಒಪ್ಪಿರಲಿಲ್ಲ. ನಿನ್ನ ದುಃಖ ಮತ್ತು ಪವಿತ್ರತೆಗಳು ನನಗೆ ಆ ಶಕ್ತಿಯನ್ನು ತಂದುಕೊಟ್ಟಿವು.'' ಎಂದು ಅಂದು ನನ್ನ ಮಾತನ್ನು ಮುಗಿಸುವುದರಲ್ಲಿಯೇ ನಮ್ಮ ಜೊತೆಗೆ ಬಂದ ಇನ್ನೊಬ್ಬ ಅವಿವಾಹಿತ ಗೆಳೆಯನು ''ನಿಮ್ಮೆಲ್ಲ ಕತೆ ಕೇಳಿದರೆ ನನಗೂ ಕಳವಳವಾಗುತ್ತದೆ. ನಿಮ್ಮಿಂದ ಆದ ಪಾಪದ ಕೆಲಸ ನೀವು ಮಾಡಿದ್ದಲ್ಲ. ಅವು ನಿಮ್ಮಕಕ್ಕನವು. ಮೂಢ ಸಮಾಜದ್ದು, ಮೂಢ ಸಮಾಜದ ಅನ್ಯಾಯಕ್ಕೆ ಸಿಲುಕಿ ಗೋಳಿಡುತ್ತಿರುವ ನಿಮ್ಮನ್ನೊ ನಾನು ಉದ್ಧರಿಸಬೇಕೆನ್ನುವೆನು. ನಿಮ್ಮ ಇಚ್ಛೆಯಿದ್ದರೆ ನಲ್ಮೆಯ ಪತಿಯಾಗಿ ಸಂಸಾರ ಯಾತ್ರೆಯನ್ನು ಸಾಗಿಸಲು ನಾನು

ಸಿದ್ಧವಿದ್ದೇನೆ.'' ಎಂದು ಹೇಳಿದನು. ಈ ಮಾತುಗಳನ್ನು ಕೇಳಿದಾಗ ಅವಳು ಯಾವ ಲೋಕಕ್ಕೆ ಮುಟ್ಟಿದಳೋ ಯಾರಿಗೆಗೊತ್ತು? ನಮ್ಮಿಬ್ಬರನ್ನು ಕಣ್ತುಂಬಾ ನೋಡಿದಳು. ಮತ್ತೆ ನೋಡಿದಳು. ತಿರುಗಿ ನೋಡಿದಳು. "ನನ್ನ ಬಯಕೆಯು ಈಡೇರಿತಲ್ಲಾ!" ಅಂದಳು, ಧನ್ಯತೆಯನ್ನು ಹೊಂದಿದಳು. ಹರುಷವು ಉಕ್ಕೇರಿಬಂದು ಆನಂದಾಶ್ರುಗಳನ್ನು ಸುರಿಸಿದಳು.

ಸಾವಿತ್ರಿಯು ನನ್ನವಳಾಗಿ, ನನ್ನ ನಲ್ಮೆಯ ಸತಿಯಾಗಿ ನನ್ನೊಡನೆ ಸಂಸಾರ ಮಾಡುವಂತೆ, ಕಮಲೆಯು ನನ್ನ ಗೆಳೆಯ ಕೇಶವನ ನಲ್ಮೆಯ ಬಗೆಯರಸಿಯಾಗಿ ಸಂಸಾರ ಸಾಗಿಸುತ್ತಿದ್ದಾಳೆ. ಈಗ ಆಕೆಗೆ ಒಂದು ಮಗುಕೂಡ ಹುಟ್ಟಿದೆ. ಅದಕ್ಕೆ ಪ್ರೀತಿಯಿಂದ ಸತ್ಯರಾಮನೆಂದು ಹೆಸರಿಟ್ಟಿದ್ದಾರೆ.



# ಬಣ್ಣಬಣ್ಣದ ಬಾಳು

**ನಾ**ನು ಹೇಳುವ ಈ ಕತೆ ಕತೆಯಲ್ಲ. ನನ್ನ ಬಾಲ್ಯಜೀವನದ ನೆನಹು. ಆ ರಮ್ಯ ಜೀವನದ ಸುಧೆಯನ್ನು ನೆನೆನೆನೆದು ಮತ್ತೆ ಮತ್ತೆ ಸವಿಯಬೇಕೆನ್ನುವ ಆಶೆ ಬಲು ಹೆಚ್ಚು ನನಗೆ. ಆ ದೇವ ಸುಧೆಯ ಕೆಲ ಅಂಶದಿಂದಲೇನೇ ಈ ಕತೆಯಾಗಿದೆ ಎಂದೆನ್ನಬೇಕು. ಇದು ಕತೆಯಾಗಿ ಮೈದಾಳಲು ಹೊರಕಾರಣಗಳು ಇಲ್ಲದೆ ಇಲ್ಲ. ಅಂದು ನಾವೆಲ್ಲ ಗೆಳೆಯರು ಪ್ರಭು ದೇವರ ದಿಬ್ಬಿಗೆ ತಿರುಗಾಡಲು ಹೋಗಿರದಿದ್ದರೆ ಇದನ್ನು ಹೇಳುವ ಪ್ರಸಂಗವೇ ಬರುತ್ತಿರಲಿಲ್ಲ.

ಅಲ್ಲಿ ನಾವು ಸುರಮ್ಯವಾದ ಸೃಷ್ಟಿಯ ಸೊಬಗನುಂಡು, ಪುಟಿಯುವ ಸೆಲೆಗಳಲ್ಲಿ ಮೊಗತೊಳೆದು, ಸುವಾಸನೆ ಸೂಸುವ ಸೊಗಸಾದ ಹೂಗಳನ್ನು ಆರಿಸಿ ಮನವಾರೆ ಹರಟೆ ಹೊಡೆದು ಮನೆಯ ಹಾದಿ ಹಿಡಿಯುವಷ್ಟರಲ್ಲಿ, ಸೂರ್ಯಕುಮಾರನು ದಣಿದಣಿದು ತನ್ನ ತಾಯಿಯ ಉಡಿಯಲ್ಲಿ ಅವಿತುಕೊಳ್ಳಲುದ್ಯುಕ್ತನಾಗಿದ್ದನು. ಬಣ್ಣಬಣ್ಣದ ಹಕ್ಕಿಗಳು ಶಾಂತ, ನಿಶ್ಶಬ್ದವಾದ ಮುಗಿಲಸಾಗರದಲ್ಲಿ ತೇಲುತ್ತ ತೇಲುತ್ತ ಆ ದಿನದ ಕೊನೆಯ ಹಾಡಿನ ಪಲ್ಲವಿಯನ್ನು ಪಠಿಸಿ ಪಠಿಸಿ ಮುಂದೆ ಮುಂದೆ ಸಾಗಿದ್ದವು. ಕೆಲ ಸುಂದರವಾದ ಹೂಗಳು 'ನಿಶೆ ಬಂದಳಲ್ಲಾ!' ಎಂದು ಖತಿಗೊಂಡು ಕಣ್ಣು ಮುಚ್ಚಿ ಗೋಣಿಗಳನ್ನು ಚೆಲ್ಲುತ್ತಿದ್ದವು. ಇದನ್ನು ನೋಡಿ ಮತ್ತೆ ಕೆಲ ಹೂಗಳು ಕಿಲಿಕಿಲಿಸಿ ನಕ್ಕು ಕಣ್ಣನ್ನ ರಳಿಸುತ್ತಿದ್ದವು. ಇದೆಲ್ಲ ನೋಡಿದ ನನಗೆ ಮೈಮರವಾಯಿತು

ಗೆಳೆಯರೆಲ್ಲರೂ ತಮ್ಮ ನಗೆಯ ಲಯಹರಿಲ್ಲಿ ಮುಂದೆ ಮುಂದೆ ನಡೆದು ಹೋದುದು ನಾನರಿತಿರಲಿಲ್ಲ. ಫಕ್ಕನೆ ನೋಡಿದೆ ಅವರೆಲ್ಲಾ ನನ್ನನ್ನು ಬಿಟ್ಟು ಬಹುದೂರ ಹೋಗಿದ್ದಾರೆ. ಅವರೂ ನನ್ನನ್ನು ನೋಡಿರಲಿಲ್ಲ.

ಗೆಳೆಯರನ್ನು ಕೂಡಬೇಕೆಂದು ಲಗುಬಗೆಯಿಂದ ಬೇಗಬೇಗನೆ ಹೊರಟೆ. ಅವರು ಇನ್ನೂ ಅಂತರದಲ್ಲಿದ್ದರು. ಅಷ್ಟರಲ್ಲಿ ನನ್ನ ಹಾದಿಯನ್ನೇ ಹಿಡಿದು ನನ್ನಿದಿರು ಒಬ್ಬ ಹೆಣ್ಣು ಮಗಳು ಬಂದಳು. ಅವಳನ್ನು ನೋಡಿದರೆ ಮೇರುಗಿರಿಯೇ ರೂಪುಗೊಂಡು ಬರುತ್ತಿದೆಯೋ ಎನಿಸಿತು. ಆಕೆ ಬಸುರಿ. ತನ್ನ ಭಾರವಾದ ಬಸುರನ್ನು ಹೊತ್ತು ನವಿಲ ನಡಿಗೆಯನ್ನಿಡುತ್ತ ಸಾವಕಾಶ ಹೊರಟಿದ್ದಳು. ಅವಳೇನೋ ಚಲುವೆಯಾದ ಹೆಣ್ಣು ಮಗಳು. ಆದರೇನು, ಬೇಸರದ ಮಾಲಿನ್ಯ ಅವಳ ಮುಖವನ್ನು ಮುತ್ತಿದ್ದರಿಂದ ಆ ಸೌಂದರ್ಯದ ಸೊಬಗಿಗೆ ಅಲ್ಲಿ ಸ್ಥಾನವಿರಲಿಲ್ಲ. ಅವಳ ಅಗಲವಾದ ಕಣ್ಣುಗಳಲ್ಲಿಯ ತೇಜವು ಅವಳ ಕಣ್ಣೀರ ಝರಿಯಲ್ಲಿ ನೆನೆನೆನೆದು ಮಂದವಾಗಿದ್ದರೂ, ಒಮ್ಮೊಮ್ಮೆ ಹೊಳಪುದೋರಿ ತನ್ನ ಗತವೈಭವವನ್ನು ಪ್ರಕಟಿಸುತ್ತಿದ್ದಿತು.

ಹೊರಟವನು ಅವಳಕಡೆ ಅಷ್ಟೇನೂ ಲಕ್ಷ್ಯಗೊಟ್ಟು ನೋಡದೆ ನನ್ನವಸರದಲ್ಲಿಯೇ ನಾನು ನಡೆದಿದ್ದೆ. ನನ್ನ ನಡಿಗೆಯ ರಭಸಕ್ಕೋ ಏನೊ, ಒಂದಿಷ್ಟು ಓರೆಯಾದಳು. ನನ್ನ ಸ್ವಾರಿ ನೆಟ್ಟಗೆ ನಡೆಯಿತು ಮುಂದೆ. ಸರಿದು ನಿಂತವಳೇ ನನ್ನ ಕಡೆ ಮೋರೆ ಹೊರಳಿಸಿ ನೋಡಿ "ಗಿರಿಮಲ್ಲ ಅಲ್ಲವೆ?" ಎಂದು ಕೇಳಿದಳು. ಹೊರಟವನು ಗಕ್ಕನೆ ನಿಂತು—

"ಹೌದು, ನೀವು ಯಾರಮ್ಮಾ?" ಎಂದೆ.

"ನನ್ನ ಗುರುತು ಹತ್ತಲೊಲ್ಲದೇನಪ್ಪಾ?" ಎಂದಳು ಮತ್ತೆ. ಆಗ ನಾನು ಒಂದಿಷ್ಟು ಗೊಂದಲದಲ್ಲಿ ಬಿದ್ದೆ. 'ಯಾರಿರಬೇಕು' ಎಂದು ಬಗೆದೆ, ನೆನಪು ಮಾಡಿಕೊಂಡೆ. ಕಡೆಗೆ,—

“ ಗುರುತು ಹತ್ತಲೊಲ್ಲದಮ್ಮಾ ನೀವು ಯಾರು ?” ಎಂದೆ.

“ ಅಯ್ಯೋ ಗಿರಿಮಲ್ಲಾ! ದೊಡ್ಡವನಾದಿ ಎಂದು ನನ್ನ ಗುರುತು ಕೂಡ ಹಿಡಿಯಬಾರದೇನಪ್ಪಾ! ನಾವು ಚಿಕ್ಕಂದಿನಲ್ಲಿ ಎಷ್ಟೋದಿನ ಕೂಡಿ ಆಡಿದ್ದು ನೆನಪು ಹಾರಿತೆ ?” ಎಂದು ಇನ್ನಿಷ್ಟು ಸಲಿಗೆಯಿಂದ ಮಾತನಾಡಿದಳು. ನಾನು ದಿಗಿಲುಗೊಂಡೆ. “ಇವ ರ್‍ಯಾರಪ್ಪಾ !” ಎಂದೆ- ಇಷ್ಟು ಪರಿಚಯವನ್ನು ಈ ಹೆಣ್ಣು ಮಗಳು ಹೇಳಿಕೊಡುತ್ತಿದ್ದರೂ ನನಗೆ ಇನ್ನೂ ನೆನಪಿಗೆ ಬರಲೊಲ್ಲದಲ್ಲ ! ಇವ ರ್‍ಯಾರಿರಬೇಕು ! ” ಎಂದುಕೊಂಡು “ ಏನವ್ಮಾ ನಿಮ್ಮ ಗುರುತು ನನಗೆ ಹತ್ತಲೊಲ್ಲದು. ನೀವೋ ಪರಿಚಯದವರಂತೆ ಮಾತನಾ ಡುತ್ತಿರುವಿರಿ. ನಿಮ್ಮೂರಾವುದು ? ಯಾರ ಮನೆಯವರು ? ” ಎಂದು ಉತ್ತರದ ಆಶೆಯನ್ನು ಬಯಸಿ ನಿಂತುಕೊಂಡೆ. ಆಗವಳು ನನ್ನ ತೀರ ಸನಿಹಕ್ಕೆ ಬಂದು ತನ್ನ ಪರಿಚಯವನ್ನೆಲ್ಲಾ ಮಾಡಿಕೊಟ್ಟಳು.

ನಮ್ಮಿಬ್ಬರ ಪರಿಚಯವಾದ ಮೇಲೆ ಮುಂದೆ ಬಹಳ ಹೊತ್ತಿನ ವರೆಗೆ ಮಾತನಾಡುತ್ತಾ ನಿಂತೆವು. ಕಾಲವು ಅನುಕೂಲವಾಗಿ ಸೂರ್ಯದೇವನು ತನ್ನ ಕಿರಣಕೈಗಳನ್ನೆತ್ತಿ ‘ನಾನು ಇನ್ನೂ ಇದ್ದೇನೆ. ಅಂಜಬೇಡಿರಿ’ ಎಂದು ಅಭಯವನ್ನಿತ್ತಿದ್ದರೆ ಇನ್ನೂ ಎಷ್ಟೋ ಹೊತ್ತು ನಿಲ್ಲಬಹುದಾಗಿತ್ತು ; ಆದರೆ ಕತ್ತಲೆಯು ಬಂದು ಅಗಲಲು ನಮಗೆ ಆಜ್ಞೆಯನ್ನಿತ್ತಿದ್ದರಿಂದ ಉಪಾಯಗಾಣದೆ ಅಷ್ಟಕ್ಕೇ ನಮ್ಮ ಮಾತು ಗಳನ್ನು ಕೊನೆಮುಟ್ಟಿಸಿದೆವು.

“ ಆಯ್ತು ಗಿರಿಮಲ್ಲ ! ನಾಳೆ ಸಾಯಂಕಾಲಕ್ಕೆ ಮನೆಯ ಕಡೆಗೆ ಬರುತ್ತೇನೆ. ತಾಯಿಯವರಿಗೆ ಹೇಳು. ಈ ದಿನ ಈ ಗುಡಿಯಲ್ಲಿಯೇ ನಮ್ಮ ವಸತಿ ” ಎಂದಂದು ನಿರೂಪವನ್ನು ಕೊಟ್ಟಳು.

“ ಆಗಲಿ, ನಾಳಿಗೆ ತಪ್ಪದೆ ಬರಬೇಕು ” ಎಂದು ಹೇಳಿ ನಾನು ಗೆಳೆಯರನ್ನು ಹಿಂಬಾಲಿಸಿದೆ,

ಹಾದಿಯಲ್ಲಿ ನನಗೆ ಚಿನ್ನಮ್ಮನ ವಿಚಾರಗಳೇ ವಿಚಾರಗಳು. ನಾನು ಚಿಕ್ಕವನಿರುವಾಗ ನನ್ನ ಸೋದರ ಮಾವನ ಮನೆಯಲ್ಲಿ ನಾನಿದ್ದದ್ದೂ, ಆಗ ತನ್ನಕ್ಕನ ಜೊತೆಗೆಂದು ಚಿನ್ನಮ್ಮ ಅಲ್ಲೇ ಕೆಲದಿನವಿದ್ದು ಬಾಲ್ಯವನ್ನು ಕಳೆದದ್ದೂ, ಮುಂದೆ ಅವಳಕ್ಕ ತೀರಿಹೋಗಲು ವಯಸ್ಸಿಗೆ ಬಂದ ಅವಳನ್ನು ಗಂಡನ ಮನೆಗೆ ಕಳುಹಿಸಿದ್ದೂ ಎಲ್ಲಾ ನೆನಿಸಿಕೊಂಡೆ. ನಮ್ಮಿಬ್ಬರಲ್ಲಿ ಬೆಳೆದ ಆಗಿನ ಪ್ರಗಾಢ ಮೈತ್ರಿ ಕಣ್ಣಿದಿರಿಗೆ ಕಟ್ಟಿ ಆಹಾ! ಆಗ ನಾವು ಎಷ್ಟು ಆಡುತ್ತಿದ್ದೆವು! ನೋಡುತ್ತಿದ್ದೆವು!! ನೆಗೆನೆಗೆದು ಕೆಲೆಯುತ್ತಿದ್ದೆವು! ಎಂದಂದುಕೊಳ್ಳಹತ್ತಿದೆ. ಪಾಪ! ಬಾಳುವೆಯ ಬೆಂಕಿಯಲ್ಲಿ ಆ ಮಿದು ಮನಸ್ಸಿನ ಚಿನ್ನಮ್ಮ ಎಷ್ಟು ಬೆಂದಿದ್ದಾಳೆ! ಆ ಹೂವಿನಂಥ ಚಿನ್ನಮ್ಮ ಹೇಗಾಗಿದ್ದಾಳೆ ಈಗ! ಈಗಾಗಲೇ ಆಕೆಗೆ ಆರುಮಕ್ಕಳಂತೆ! ಕೈಹಿಡಿದ ಯಜಮಾನ ರೋಗಿಯಂತೆ! ಮನೆಯ ಎಲ್ಲ ಭಾರ ಇವಳ ಮೇಲಂತೆ! ಗಂಡನ ರೋಗ ಕಳೆಯುವುದಕ್ಕಾಗಿ ದೇವರಿಗೆ ಬಂದಿದ್ದಾಳಂತೆ. ಅಯ್ಯೋ ಅವಳಿಗೆ ಎಂಥ ಕಷ್ಟ! ಎಂದು ಬಗೆದೆ. ನಾಳೆ ಬರುತ್ತೇನೆಂದು ಹೇಳಿದ್ದಾಳೆ. ಬರಬಹುದೆ? ಅವಳಕ್ಕ ತೀರಿದ ಮೇಲೆ ನಮ್ಮ ಮಾವನು ಮತ್ತೊಬ್ಬಳನ್ನು ಮದುವೆ ಮಾಡಿಕೊಂಡಿದ್ದಾನೆ. ಅದು ಆಕೆಗೆ ಒಪ್ಪಿಗೆಯೆ?" ಎಂದು ಇನ್ನೂ ಹೀಗೆ ಏನೇನೋ ಭಾವಿಸಿದೆ.

ಆಯ್ತು, ಆ ದಿನದ ರಾತ್ರಿಯೆಲ್ಲಾ ನನ್ನ ಬಾಲ್ಯದ ನೆನವಿನಲ್ಲಿಯೇ ಕಳೆದೆ. ಆಗ ನನ್ನ ಹೃದಯಕ್ಕೆ ಯಾವುದೋ ಒಂದು ಕತ್ತಲೆ ಬಂದು ಮುಸುಕಿತು. "ನಾಳೆ ನಮ್ಮ ಮನೆಗೆ ಚಿನ್ನಮ್ಮ ಬರುವಳಲ್ಲಾ" 'ಎನ್ನುವ ಒಂದು ಹಿಗ್ಗು ಆಗಾಗ ಮಿಂಚಿ ಆ ಕತ್ತಲೆಯಲ್ಲಿ ಒಂದು ತರದ ಬೆಳಕನ್ನು ಬೀರುತ್ತಿತ್ತು. ಅಷ್ಟರಲ್ಲಿ ಪ್ರಭಾತವು ಸಮೀಪಿಸಿ ಸೂರ್ಯನು ತನ್ನ ಬೆಳಕನ್ನು ಬೀರತೊಡಗಿದನು. ನಾನಂದು ಚಿನ್ನಮ್ಮನ ಸ್ವಾಗತಕ್ಕಾಗಿ ಬೇಗನೆ ಎದ್ದು ಮನದಲ್ಲಿ ಮುಂಡಿಗೆ ಮಾಡಿದಂತೆ ಕೆಲಸಗಳನ್ನು ಕೈಕೊಂಡೆ,

ನಾವು ಚಿಕ್ಕವರಿರುವಾಗ "ಭೋರಾಗಿ ಬೆಳೆದ ಬೋರೆಹಣ್ಣು ಗಳನ್ನು ತಂದುಕೊಡು ಗಿರಿ!" ಎಂದು ಮೇಲೆ ಮೇಲೆ ಹೇಳಿ ನನ್ನಿಂದ ಬೋರೆ ಹಣ್ಣುಗಳನ್ನು ತರಿಸಿಕೊಂಡು ಆಕೆ ತಿನ್ನುತಿದ್ದಳು; ಆದುದ ರಿಂದ ಈಗ ಅಂಥ ಬೋರೇ ಹಣ್ಣುಗಳನ್ನು ಎಲ್ಲೆಲ್ಲಿಂದಲೋ ಸಂಗ್ರ ಹಿಸಿ ತಂದೆ. ಅವು ಸಿಹಿ ಇವೆಯೋ ಇಲ್ಲವೋ ನೋಡುವುದಕ್ಕಾಗಿ ಶಬರಿಯಂತೆ ನಾನೂ ತಿಂದು ನೋಡಿದೆ. ಅವಳಕ್ಕ ತೊಟ್ಟುಕೊಳ್ಳು ತ್ತಿದ್ದ ಹಸಿರು ಮಗ್ಗಿಯ ಬಿಳಿ ಹೂವಿನ ಕುಪ್ಪಸದಂಥ ಕುಪ್ಪಸ ನನಗೂ ಬೇಕೆಂದು ಗೋಡೆಗೆ ಅವಿತು ಬಿಕ್ಕಿ ಬಿಕ್ಕಿ ಅಳುತ್ತಿದ್ದುದೂ ಅದನ್ನು ನೋಡಿ ನನಗೆ ಸಹಿಸದಾಗಲು " ಚಿನ್ನಾ ! ನಾನು ದೊಡ್ಡವನಾದ ಮೇಲೆ, ಅದೇಕೆ ಅದಕ್ಕೂ ಒಳ್ಳೇ ಕುಪ್ಪಸಾ ತಂದು ಕೊಡುತ್ತೇನೆ. ಅಳಬೇಡ ಗಪ್ಪು" ಎಂದು ಅವಳನ್ನು ನಂಬಿಸಿದ್ದು ನೆನಪಾಗಿದ್ದ ರಿಂದ ಊರ ಅಂಗಡಿಗಳನ್ನೆಲ್ಲಾ ತಿರುಗಿ ಅಂಥ ಕುಪ್ಪಸಗಳನ್ನು ಹುಡುಕಿ ತಂದೆ. ಯಾರಾದರೂ ದಂಡಿ ಕಟ್ಟಿಕೊಂಡದ್ದನ್ನು ನೋಡಿ ದರೆ ಹಟಮಾಡಿ ಆಕೆ ಅದನ್ನು ಸಂಗ್ರಹಿಸಿದ್ದುದು ನನಗೆ ಗೊತ್ತು. ಆದ್ದರಿಂದ ದುಂಡು ಮಲ್ಲಿಗೆಯ ನನೆದಂಡೆಯನ್ನು ಹೂಗಾರರಿಂದ ಕಟ್ಟಿಸಿದೆ. ಹೀಗೆ ಇನ್ನೂ ಏಸೇಸೋ ಆಕೆಯ ಒಲವಿನ ಸಾಮಗ್ರಿ ಗಳನ್ನು ಸಂಗ್ರಹಿಸಿದೆನಲ್ಲದೆ ತಿಂಡಿ ತಿನಸುಗಳನ್ನು ತಂದಿಟ್ಟೆ.

ಇಂದು ನಮ್ಮ ಮನೆಗೆ ಚಿನ್ನಮ್ಮ ಬರುವವರೆಗೆ ಊಟ ಮಾಡು ವುದಿಲ್ಲವೆಂದು ನಾನು ನಿರ್ಧರಿಸಿದ್ದರಿಂದ ಮಧ್ಯಾಹ್ನದ ಊಟಕ್ಕೆ ಹೋಗಿರಲಿಲ್ಲ. ನನ್ನ ಕೋಣೆಯಲ್ಲಿಯೇ ಕುಳಿತು ಆಕೆ ಯಾವಾಗ್ಗೆ ಬರುವಳೋ ಎಂದು ಹಾದಿಕಾಯ ತೊಡಗಿದೆ. "ಸಂಜೆಗೆ ನಾನು ಬರುತ್ತೇನೆ," ಎಂದು ಹೇಳಿದ ಆಕೆಯ ಮಾತು ನನ್ನ ಜ್ಞಾಪಕಕ್ಕೆ ಇರದೆ ಇರಲಿಲ್ಲ. ಸುಮ್ಮನೆ ಈಗ ಹಾದಿ ನೋಡುತ್ತಿರುವುದು ವ್ಯರ್ಥ ವೆಂದರಿತಿದ್ದರೂ "ಈಗೇ ಅಕಸ್ಮಾತ್ತಾಗಿ ಯಾಕೆ ಬರಬಾರದು ?" ಎಂದು ಹಾತೊರೆವ ಮನವು ಸುಮ್ಮ ಸುಮ್ಮನೆ ಬಗೆಯುತಲಿತ್ತು.

ಸೂರ್ಯನು ಪಶ್ಚಿಮಕ್ಕೆ ತೆರಳಿದಂತೆಲ್ಲಾ ನನ್ನ ತವಕವು ತಾಳ ಗೆಟ್ಟು ಕುಣಿಯತೊಡಗಿತು. ಈಗ ಆಕೆ ಒಬ್ಬ ಗೃಹಸ್ಥನ ಗೃಹಿಣಿ ಯೆಂಬುದನ್ನು ತುಂಬಾ ಮರೆತು ಇಷ್ಟು ಹಾತೊರೆಯುತ್ತಿದ್ದೆನಲ್ಲದೆ, ನಮ್ಮ ಈಗಿನ ವಯೋಮಾನವನ್ನು ಮರೆತು ಆಕೆ ಒಬ್ಬ ಬಾಲ್ಯಜೀವ ನದ ಸರಳ ಮುಗ್ಧ ಬಾಲೆಯೆಂದೂ, ನಾನೊಬ್ಬ ಬಾಲ್ಯ ಪ್ರಪಂಚದಲ್ಲಿ ಹುಡಿಮಾಡುವ ಹುಡುಗನೆಂದೂ ಭಾವಿಸಿದ್ದೆನು.

ಸೂರ್ಯನು ತೆರಳಿಹೋದನು. ಕತ್ತಲೆಯು ಸಾವಕಾಶ ಸುತ್ತು ಮು ತ್ತುಹಬ್ಬ ತೊಡಗಿತು. ಕತ್ತಲೆಯು ಹಬ್ಬಿದಂತೆಲ್ಲ ನಿರಾಶೆಯು ತನ್ನ ಕಪ್ಪು ಅಡಿಗಳನ್ನು ಒಂದೊಂದಾಗಿ ನನ್ನ ಹೃದಯ ವೇದಿಕೆಯ ಮೇಲೆ ಮುದ್ರಿಸತೊಡಗಿತು. “ ಚಿನ್ನಮ್ಮ ಇನ್ನೂ ಏಕೆ ಬರಲಿಲ್ಲ ? ” “ಎನ್ನುವ ಒಂದು ಪ್ರಶ್ನೆ ಒಂದೇ ಸವನೆ ನನ್ನಲ್ಲಿ ಜಪಮಾಡತೊಡ ಗಿತು. “ನಮ್ಮ ಮನೆಗೆ ಆಕೆ ಬರಲಿಕ್ಕಿಲ್ಲವೆ ? ” ಎಂದು ನನ್ನ ಹೃದಯದಾಳವು ಸಾವಕಾಶವಾಗಿ ಕೇಳುತ್ತಿತ್ತು. “ ಬಂದಾಳು ! ಬಂದಾಳು ! ಇಷ್ಟರಲ್ಲಿ ಬಂದಾಳು !! ” ಎನ್ನುವ ಒಂದು ಹೊನ್ನೆಯ ಹುಳವು ತನ್ನ ಸಣ್ಣ ಬೆಳಕನ್ನು ಬೀರಿ ಆಶೆಯನ್ನು ಕೊಟ್ಟು ಹೋಗು ತ್ತಿತ್ತು. ಹೀಗೆ ಏಸೊ ಪ್ರಶ್ನಗಳು, ಏಸೊ ಉತ್ತರಗಳು, ಏಸೊ ಭಾವನೆಗಳು, ಏಸೊ ತರ್ಕ ವಿತರ್ಕಗಳು ನನ್ನ ಮನದ ಮಂಟಪದ ಮೇಲೆ ತಾಂಡವವಾಡ ತೊಡಗಿದವು.

ರಾತ್ರಿ ಹತ್ತು ಗಂಟೆಯಾಗಿದೆ. ನಮ್ಮಜ್ಜಿ “ ಗಿರಿ, ಚಿನ್ನಮ್ಮ ಇನ್ನೂ ಬರಲೇ ಇಲ್ಲವಲ್ಲೋ. ಆಯ್ತು ನಾಳೆ ಬಂಬಾಳು. ರಾತ್ರಿ ಬಹಳವಾಗಿದೆ. ನೀನು ಊಟ ಮಾಡು, ಬಾ. ” ಎಂದು ಒಳಗಿ ನಿಂದಲೇ ಕೆಮ್ಮುತ್ತ ನುಡಿದಳು. ಆಗ ನಾನು ನಮ್ಮ ಬಾಲ್ಯಜೀವ ನದ ಸುರಮ್ಯವಾದ ಚಿತ್ರಗಳನ್ನು ಚಿತ್ರಿಸುವುದರಲ್ಲಿ ತಲ್ಲೀನನಾಗಿದ್ದೆ.

ಅಂದು ಚಿನ್ನಮ್ಮನೊಡನೆ ಆಡಿದ ಗೊಂಬೆಯಾಟದ ನೆನಪು ನನಗೆ ಬಂತು. ಆಕೆ ತನ್ನ ಗೊಂಬೆಗೆ ಸಜೀವವೆಂದು ಬಗೆದು

ಮುದ್ದಿನ ಮಗುವಾಗಿ ಮಾಡಿಕೊಂಡದ್ದೂ ಗದ್ದ ಹಿಡಿದು ಮುದ್ದ ನಿಟ್ಟು ಲಲ್ಲೆಯಿಂದ ಎದೆಗವಚಿಕೊಂಡು ಜೋಗುಳಪಾಡಿದ್ದೂ ನೆನಪಿಗೆ ಬಂತು. ಒಮ್ಮೆ "ನನ್ನ ಕಂದಮ್ಮಾ! ಅಳಬೇಡ ನಿನ್ನನ್ನು ತೊಟ್ಟಿಲಲ್ಲಿಟ್ಟು ತೂಗಲಿಯಾ?" ಎಂದು ನಿಜವಾಗಿಯೇ ತನ್ನ ಗೊಂಬೆ ಅಳುತ್ತಿದೆಯೋ ಏನೋ ಎನ್ನುವಂತೆ ತನ್ನ ಪುಟ್ಟ ಕೈಗಳಲ್ಲಿ ಅದನ್ನು ಎತ್ತಿ ಸಣ್ಣದಾದ ತನ್ನ ಬಣ್ಣದ ತೊಟ್ಟಿಲಲ್ಲಿ ಮಲಗಿಸಿ :—

"ಕಿರಿಕೀರಿ ಕಂದಮಗ ಬೆರಕೀಗಿ ನೀರಿಲ್ಲ |
ಸರಕಾರದಗಸಿ ತೆರದಿಲ್ಲ | ನನರಾಯಾ ||
ಧೊರಿ ಹೋಗಿ ಅಗಸಿ ತೆರಸ್ಯಾರ ||

ಎಂದು ಜೋಗುಳ ಹಾಡಿ, ಓಳೊಳೊಳೋ ಕಂದಾ! ಎಂದು ಲಲ್ಲೆಯ ದನಿತಗೆದಳು. ಮಾವ ಬಾಗಿಲಲ್ಲಿ ನಿಂತು ಇದನ್ನೆಲ್ಲ ನೋಡುತ್ತಿದ್ದನು. ಆಗ ಒಮ್ಮೆಲೆ ನನ್ನ ದೃಷ್ಟಿ ಆ ಕಡೆ ಹೋಯಿತು. "ಇಂದು ಕೂಸು ಕೈಬಿಡಲೊಲ್ಲದು, ಕಾಡುತ್ತಿದೆ. ಒಂದೆರಡು ಕೊಡ ನೀರು ತಗೆದುಕೊಂಡು ಬಾ" ಎಂದು ಮಾಡಿದ ಚಿನ್ನಮ್ಮನ ಆಜ್ಞೆಯನ್ನು ಪಾಲಿಸಲು ತಗೆದುಕೊಂಡು ಹೊರಟ ಕಲ್ಲು ಕೊಡವನ್ನು ಬೀಸಿ ಒಗೆದು ನಾನು ಓಡಿಬಿಟ್ಟೆ. "ಹೀಗೆ ಕೊಡಗಳನ್ನು ಒಗೆದರೆ ಹೇಗೆ ತಾಳಿಯಾವು. ನಾಲ್ಕುದಿನಕ್ಕೊಂದು ಕೊಡ ತರಬೇಕೆಂದರೆ ಪ್ರಪಂಚಾ ಹೇಗೆ ನಡೆಯ ಬೇಕು?" ಎಂದನ್ನುವ ಮನೆಯ ಯಜಮಾನತಿಯ ಹಾಗೆ ಈಕೆಯೂ ಅನ್ನುವಳೋ ಏನೋ ಎನ್ನುವಂತೆ ಮುಖವನ್ನು ತಿರಿಗಿಸಿದಳು. ಎದುರಿನ ಬಾಗಿಲಿನಲ್ಲಿಯೇ ಮಾವನ ಮುಖ ಕಂಡಿತು. ಮುಂದೆ ಹೊರಡಲುದ್ಯುಕ್ತವಾದ ಅವಳ ಜೋಗುಳದ ಹಾಡು ಹಿಂದೆ ಸರಿದು ಎಲ್ಲೋ ಅಪಸ್ವರಗೊಂಡಿತು. ಇದನ್ನು ಕಂಡ ಮಾವ "ಯಾರೆ ಅಗಸಿ ಬಾಗಿಲನ್ನು ತೆರೆಸಿದ ನಿನ್ನ ರಾಯಾ?" ಎಂದು ಕೇಳುತ್ತ ಒಳಗೆ ಬಂದನು. ಆಗ ಚಿನ್ನಮ್ಮ ನಾಚಿಕೆಯಿಂದ ತಲೆ ಬಾಗಿಸಿದಳು. ತೊಟ್ಟಿಲ ತೂಗುವ ಕೈಗಳೂ ತಮ್ಮ ಕೆಲಸದಿಂದ ನಿವೃತ್ತವಾದವು. ಇಷ್ಟರಲ್ಲಿಯೇ

ಮಾವ ಬಂದು ಅವಳ ಕೈಹಿಡಿದನು. ಆಗ ಲಜ್ಜೆ ಮತ್ತು ಮುನಿಸುಗಳಿಂದ ಕೂಡಿದ ಮುಗುಳು ನಗೆಯನ್ನು ಸೂಸಿ ಜೋಲುಬೀಳುತ್ತ "ಬಿಡೋ ಮಾವಾ ;" ಎಂದು ಕೈಕೊಸರಿಕೊಂಡು ಹೋದಳು. ಅದೆಲ್ಲಾ ನೆನಪಿಗೆ ಬಂತು. ಮತ್ತೊಮ್ಮೆ ಚಿನ್ನಮ್ಮ ತನ್ನಕ್ಕನು ಕೂಸನ್ನು ಆಡಿಸಿದಹಾಗೆ ತಾನು ಗೊಂಬೆಯನ್ನು ಆಡಿಸುವಳು. ಅದರ ಕಣ್ಣಿಗೆ ಕಾಡಿಗೆ ಹಚ್ಚುವಳು. ತಲೆಯನ್ನು ತೀಡಿ ಜಡೆಯನ್ನು ಹಿಂದಕ್ಕೆ ಸರಿಸುವಂತೆ ನಟಿಸುವಳು. ತನ್ನ ಕಾಲುಗಳನ್ನು ಚಾಚಿ ತೊಡೆಯ ಮೇಲೆ ಗೊಂಬೆಯನ್ನಿಟ್ಟು ಆನೆಯಾಡಿಸುವಳು.

"ಕೂಸು ಮಾಯಾದ ಗಿಣಿಯೆ ।
ಕೈಯಾಗ ಭಂಗಾರ ಚಿಣಿಯೆ ॥
ಎಲ್ಲ್ಯಾಡಿ ಬಂದೆ ಅರಗಿಣಿಯೆ ।
ಕೂಸು ಮಾಯಾವ ಗಿಣಿಯೇ" ॥

ಎಂದು ಹಾಡುವಳು. ಆಗ ಹಟಾತ್ತಾಗಿ ನಾನಲ್ಲಿ ಹೋದರೆ "ಥೂ" ಎಂದುಗುಳಿ "ಎಂಥಾ ಕಾಲಿಂದ ಬಂದೇ ನಮ್ಮಪ್ಪಾ! ಅಲ್ಲೇ ನಿಲ್ಲು. ನನ್ನ ಕೂಸಿಗೆ ಕಾಲಧೂಳಿಯಾದೀತು. ಎಂದು ನೀರು ಸಿಂಪಡಿಸುವಳು. ಅದೂ ಕೂಡ ಈಗ ನೆನಪಿಗೆ ಬಂತು.

ಒಮ್ಮೊಮ್ಮೆ ನಾವಿಬ್ಬರೂ ಕೂಡಿ ಊರು ಮುಂದಿನ ಭಾವಿಯ ಹತ್ತರ, ಹುಡಿ-ಮಣ್ಣಿನಲ್ಲಿ ಗುಬ್ಬೀ ಗೂಡುಗಳನ್ನು ಕಟ್ಟುತ್ತಿದ್ದೆವು ಆ ಮಣ್ಣಿನ ಗೂಡುಗಳೇ ನಮಗೆ ಇಂದ್ರಭವನಗಳಾಗುತ್ತಿದ್ದವು. ಆ ಪುಟ್ಟ ಗೂಡಿನಲ್ಲಿಯೇ ದೇವರ-ಮನೆ, ನಡು-ಮನೆ, ಅಡುಗೆಯ ಮನೆಗಳಾಗಿ ವಿಭಾಗಿಸಿಕೊಳ್ಳುತ್ತಿದ್ದೆವು. ಅದಕ್ಕೆ ಯಜಮಾನಳು ಚಿನ್ನಮ್ಮ. ಆಕೆ ಕುಳಿತಲ್ಲಿಯೇ ಕುಳಿತು "ಈಗ ಈ ಗೂಡು ಅಡುಗೆಯ ಮನೆ" ಎಂದು ಭಾವಿಸುವಳು. ಆಗ ಅವಳ ಭಾವನೆಗೆ ಅದು ಹಾಗೇ ಆಗುವುದು. ಅಲ್ಲಿ ಅವಳು ಕಲ್ಲುಹರಳುಗಳ ಪಾತ್ರೆಗಳಲ್ಲಿ ತರತರದ ಪಕ್ವಾನ್ನಗಳನ್ನು ಸಿದ್ಧ ಮಾಡುವಳು. ಮತ್ತೊಮ್ಮೆ

"ಇದು ದೇವರ ಮನೆ" ಎಂದು ಭಾವಿಸುವಳು. ಆಗ ಅವಳ ಭಾವನೆಗೆ ಅದು ದೇವರ ಮನೆಯೂ ಆಗುವದು. ಅಲ್ಲಿ ದೇವರ ಪೂಜೆಯಾದ ಮೇಲೆ ಪಕ್ವಾನ್ನಗಳ ನೈವೇದ್ಯವಾಗುವುದು. ಬಳಿಕ ಕಲ್ಲಿನ ಎಮ್ಮೆ ಆಕಳುಗಳಿಗೆ ತಿಂಡಿ ತಿನಸುಗಳನ್ನು ಇಟ್ಟು ಕಲ್ಲಿನ ಒಂದು ಪಾತ್ರೆಯನ್ನೇ ಕೈಯ್ಯಲ್ಲಿ ಹಿಡಿದು "ಚಿಂವುತ್, ಚಿಂವುತ್" ಎಂದು ಸತ್ಯವಾಗಿಯೇ ಎಮ್ಮೆಯ ಹಾಲನ್ನು ಹಿಂಡುತ್ತಿದ್ದೇನೋ ಏನೋ ಎನ್ನುವಂತೆ ನಟಿಸುತ್ತ ಕುಳಿತಿರುವ ನನ್ನನ್ನು ಆಕೆ ಒದರುವಳು. "ಊಟಕ್ಕೆ ಬಾ ಗಿರಿಮಲ್ಲಾ" ಎಂದನ್ನುವಳು. ಆಗ "ಚಿನ್ನಾ! ಚಿನ್ನಾ!! ಈ ಹಾಲು ಬೇಗ ತಗೆದುಕೊ, ಎಲ್ಲಿಯಾದರೂ ಚೆಲ್ಲಿಯಾವು." ಎಂದನ್ನುತ್ತ ಆ ಕಲ್ಲು ತಂಬಿಗೆಯನ್ನು ಅವಳ ಕೈಯ್ಯಲ್ಲಿ ಕೊಡುವೆನು. ಆಗವಳು "ಗಿರಿ! ನೀನೊಂದು ಬಟ್ಟಲ ಹಾಲು ಕುಡಿ" ಎನ್ನುವಳು. ನಾನು "ಒಲ್ಲೆ" ಎನ್ನುವೆ "ಕುಡಿಯಪ್ಪಾ! ಕುಡಿದು ಬೇಗ ದೊಡ್ಡವನಾಗು." ಎಂದು ತಾಯಿ ತನ್ನ ಮಗುವಿಗೆ ಅನ್ನುವಹಾಗೆ ನನಗನ್ನುತ್ತ ಬೆನ್ನ ಮೇಲೆ ಕೈಯಾಡಿಸುವಳು. "ನೀನು ಕುಡಿದರೆ ಮಾತ್ರ ನಾನು ಕುಡಿಯುತ್ತೇನೆ" ಎಂದಂದು ನಾನು ಹಟಮಾಡಲು ಅವಳೂ ಕುಡಿಯಲುದ್ಯುಕ್ತಳಾಗುವಳು. ನಮ್ಮ ಭಾವನೆಗೆ ರತ್ನಮಯಗಳಾಗಿ ಹೊಳೆಯುವ ಆ ಕಲ್ಲುಹರಳಿನ ಪಾತ್ರೆಗಳನ್ನು ಕೈಯ್ಯಲ್ಲಿ ಹಿಡಿದು ನಮ್ಮ ಮೃದುವಾದ ತುಟಿಗಳ ಮೇಲೆ ಸಾವುಕಾಶವಾಗಿಟ್ಟು ಸುಳ್ಳು ಗುಟುಕುಗಳನ್ನು ಗುಟುಕರಿಸುತ್ತ ಸಂತಸದ ದೃಷ್ಟಿಗಳನ್ನು ಒಬ್ಬರೊಬ್ಬರ ಕಡೆಗೆ ನವಾಗ ಹೊರಳಿಸುತ್ತಿದ್ದೆವು. ಇದೆಲ್ಲವನ್ನು ನೆನಿಸಿ "ಆಹಾ! ಆಗಿನ ಆ ಹಾಲು ಅಷ್ಟು ಸಿಹಿ! ಅಷ್ಟು ಸ್ವಾದ!! ನಮ್ಮ ಭಾವನೆಗೆ, ದೇವೇಂದ್ರನ ಸುಧೆ ನಮ್ಮ ಸುಳ್ಳು ಹಾಲಿಗೆ ಸಾಟಿಯಾಗದೆ ಹುಳಿ-ಯಾಗಿತ್ತಲ್ಲ! ಕಲ್ಲು ಹರಳುಗಳಲ್ಲೆಲ್ಲ ಜೀವಕಳೆ ತುಂಬಿ ನಮಗೆ ಹಾಲುಕೊಡುತ್ತಿದ್ದುದರಿಂದ ಇಷ್ಟು ಸಿಹಿಯಾಗಿರಬೇಕೆ? ಅವುಗಳಿಗೆ ಜೀವಕಳೆಯಷ್ಟೇ ತುಂಬಿರದೆ ಅವು ನಮ್ಮ ಕಣ್ಣುಗಳಿಗೆ ಹೇಮಮಯ ರತ್ನಮಯಗಳಾಗಿ ಹೊಳೆಯುತ್ತಿದ್ದವಲ್ಲ!! ನೆಲದ ಮೇಲಿನಮಣ್ಣು

ಹುಡಿ ನುಗೆ ಮಣ್ಣು ಹುಡಿಯಾಗಿರದೆ ಅಬರಂಗದ ಹುಡಿಯಾಗಿತ್ತಲ್ಲ!!! ಅದಕಂತಲೇನೇ ಹುಡಿಯಾಡಿದಷ್ಟೆಲ್ಲಾ ನಮಗೆ ನಾವು ಸುಂದರರಾಗಿ ಕಾಣುತ್ತಿರಬೇಕು. '' ಎಂದಂದು ಉದ್ಗಾರಗಳನ್ನು ತೆಗೆದೆ.

ಮತ್ತೊಮ್ಮೆ ಚಿನ್ನಮ್ಮ ವಾತ್ಸಲ್ಯದ ತಾಯಿಯಾಗಿ ನನ್ನನ್ನು ಪರಿ ಪರಿಯಾಗಿ ಪಾಲಿಸುವಳು. ನಾನು ಹಟಮಾರಿಯಾದ ಹಡುಗನಾಗಿ ಎಷ್ಟೆಷ್ಟೋ ಪೀಡಿಸುತ್ತಿದ್ದೆ. ಅಷ್ಟರಲ್ಲಿಯೇ ಮತ್ತೆ ನಾನು ಮುದಿ ತಂದೆಯಾಗುವೆ. ಆಕೆ ಗಂಡನ ಮನೆಗೆ ಹೊರಟುನಿಂತ ಪ್ರಾಯದ ನನ್ನ ಮಗಳಾಗುವಳು. "ನನಗೆ ಅಂಥಾ ಸೀರೆ ಬೇಕು. ಇಂಥಾ ಕುಪ್ಪಸ ಬೇಕು" ಎಂದೆಂದು ಹಟ ಮಾಡುವಳು. "ಅಮ್ಮಾ! ಇನ್ನೊಮ್ಮೆ ಬಾ. ಇನ್ನೊಮ್ಮೆ ಬಂದಾಗ ನೀನು ಬೇಡಿದ್ದನ್ನೆಲ್ಲಾ ಕೊಡುತ್ತೇನೆ.'' ಎಂದು ಹೇಳಿ ಸಂತವಿಸಿದಾಗ ಆಕೆ ಕೇಳದಿರಲು ಕಾಗದ ತುಂಡಿನ ಸೀರೆ, ಕಟ್ಟಿಗೆ ತುಂಡಿನ ಆಭರಣಾ ಕೊಟ್ಟು ಕಳಿಸುತ್ತಿದ್ದೆ. ಹೀಗೆ ಮತ್ತೊಂದು ದಿನ ದಾಂಪತ್ಯದ ಆಟಗಳನ್ನು ಆಡುತ್ತಿದ್ದೆವು. ಆಗ ನಾನು ಗಂಡನಾಗುತ್ತಿದ್ದೆ. ಆಕೆ ಹೆಂಡತಿಯಾಗುತ್ತಿದಳು. ಈಗಿನ ಈ ಗಂಡ ಹೆಂಡರ ದಾಂಪತ್ಯ ನಮ್ಮದಲ್ಲ; ದೇವಲೋಕದ್ದು. ಆ ದೇವಲೋಕದ ಅಪ್ಸರ ಅಪ್ಸರೆಯರದು. ನಾವು ಇಂಥ ಅಪ್ಸರರಾಗಿ ಕಲ್ಪನೆಯ ಮಾನವನ್ನೇರುತ್ತ ಭುವನ ಬ್ರಹ್ಮಾಂಡಗಳನ್ನು ಸುತ್ತುತ್ತಿದ್ದೆವು. ಮತ್ತೆ ಒಂದು ದಿನ ಅಣ್ಣ ತಂಗಿಯರಾಗಿಯೂ ಅಕ್ಕ ತಮ್ಮಂದಿರಾಗಿಯೂ ಹಲವು ತರದ ಆಟಗಳನ್ನು ಆಡುತ್ತಿದ್ದೆವು. ಒಂದು ದಿನದ ಭಾವನೆ ಮತ್ತೊಂದು ದಿನ ಉಳಿಯುತ್ತಿಲಿಲ್ಲ ನಮಗೆ. ಹೊಸ ಹೊಸ ದಿನಗಳುದಯಿಸಿದಂತೆ ಹೊಸ ಹೊಸ ಸೃಷ್ಟಿಗಳನ್ನು ನಾವು ಹುಟ್ಟಿಸುತ್ತಿದ್ದೆವು. ಆ ನಮ್ಮ ದೃಷ್ಟಿ ಮೃಣ್ಮಯ ಸೃಷ್ಟಿಯಲ್ಲ ಚಿನ್ಮಯ ಸೃಷ್ಟಿ. ಯಾಕೆಂದರೆ ಮುಟ್ಟಿದ್ದು ತಟ್ಟಿದ್ದು, ಕಂಡದ್ದು, ಉಂಡದ್ದು, ಘೇನಿಸಿದ್ದು ಭಾವಿಸಿದ್ದು ಎಲ್ಲವು ನಮಗೆ ಚಿನ್ನಮಯ ರನ್ನಮಯಗಳಾಗಿ ಹೊಳೆಯುತ್ತಿದ್ದವು.

ಮತ್ತೆ ಎಷ್ಟೋ ಸಾರೆ, ಊರು ಮುಂದಿನ ಉಸುಬಿನಲ್ಲಿ ನಾವಿಬ್ಬರೂ ಕೂಡಿ ನೆಗೆಯಾಟವಾಡುವುದೂ, ಹರಿವ ಹೊಳೆಯ ಬಂಡೆಗಳ ಮೇಲೆ ಕುಳಿತು ನೀರಿನಲ್ಲಿ ಕಾಲನಿಳಿಬಿಡುತ್ತ ಚೆಲ್ಲಾಟವಾಡುವುದೂ, ಕಲ್ಲು ದಿಬ್ಬಿನ ಮೇಲೆ ಕುಳಿತು ಕೇಕೆಯಾಟ ಮಾಡುವುದೂ ನೆನಪಿಗೆ ಬಂತು. ಆಗ ಹಕ್ಕಿಗಳೆಲ್ಲ ಇಂಚರದಿ ನಮ್ಮೊಡನೆ ನಲ್ಮೆಯಿಂದ ಕಲ್ಲು, ಮಣ್ಣು, ಗಿಡ, ಮರಗಳೆಲ್ಲ ನಮ್ಮೊಡನೆ ನಲ್ಮೆಯಿಂದ ಮಾತಾಡುತ್ತಿದ್ದವು. ನಮ್ಮ ಕೇಕೆಯಾಟ ಮುಗಿದ ಮೇಲೆ ಸಂಜೆಯ ಸೂರ್ಯನ ತಿಳಿಗೆಂಪು ಅಳುಕಿ ಹೋಗುವವರೆಗೆ ನಾವಲ್ಲೇ ಕುಳಿತು ಏನೇನೋ ಮಾತುಗಳನ್ನಾಡುತ್ತಿದ್ದೆವು. ತಿಳಿಗುಲಾಬಿಯ ಸಂಜೆಯ ಆಗಸದಲ್ಲಿ ಚಿಲಿಪಿಲಿ ಗುಟ್ಟೆ ತಮ್ಮ ಗೂಡಿನೆಡೆ ನಡೆದಿರುವ ಹಲವು ಬಣ್ಣದ ಹಕ್ಕಿಗಳನ್ನು ಕಂಡು ಅವುಗಳಮೇಲೆ ಕುಳಿತು ಮುಗಿಲೆಲ್ಲಾ ಹಾರಿ ಅಲ್ಲಿ ಹರಡಿದ ಮಾಣಿಕದ ಹುಡಿಯನ್ನು ಮೈಯಲ್ಲಾ ಬಳಿದುಕೊಳ್ಳಬೇಕೆನ್ನುತ್ತಿದ್ದೆವು. ಅದಕ್ಕಾಗಿ ಕೈಮಾಡಿ ಅವುಗಳನ್ನು ಕರೆಯುತ್ತಿದ್ದೆವು. ಅವು ಬಾರದಿರಲು ನಮಗೆ ಪಕ್ಕಗಳಿದ್ದರೆ ನಾವೀಗಲೇ ಹಾರಿ ಹೋಗಿ, ಆ ಹುಡಿಯ ಹೊಳೆಯನ್ನು ಈಸುತ್ತ ನಮ್ಮ ಮಾತು ಕೇಳದ ಆ ಹಕ್ಕಿಗಳ ಹೂವಿನಂಥ ರೆಕ್ಕೆಗಳನ್ನು ಹಿಡಿದೆಳೆಯುತ್ತಿದ್ದೆನಲ್ಲಾ!" ಎಂದು ನಮ್ಮ ನಮ್ಮೊಳಗೇ ಅನ್ನುತ್ತಿದ್ದೆವು. ಇದೆಲ್ಲಾ ನೆನಪಿಗೆ ಬಂದು "ಆಹಾ! ಆ ಬಾಲ್ಯ ಜೀವನವು ಏನು ಸೊಗಸು! ಏನು ರಮ್ಯ!! ನಿರ್ಜರರ ಆನಂದ ಇದಕೆ ಸಾಟಿಯೆ!!! ದೇವಗಂಧರ್ವರಂತೆ ನಮ್ಮ ಮನದ ಪಕ್ಕಗಳನ್ನು ಬಿಚ್ಚಿ ಏನೇನೋ ಲೋಕಗಳಿಗೆ ದಾಳಿ ಇಡುತ್ತಿದ್ದೆವಲ್ಲಾ!" ಎಂದೆನ್ನುತ ಮೇಲೆ ಮೇಲೆ ಮತ್ತೆ ಉದ್ಗಾರಗಳನ್ನು ತಗೆಯ ತೊಡಗಿದೆ. ಹೀಗೆ ಉದ್ಗಾರಗಳನ್ನು ತೆಗೆಯುತ್ತಲೇನೇ ಮತ್ತೆ ಏನೋ ಚಿತ್ರಗಳನ್ನು ನೆನಸಿಕೊಂಡೆ. ನೆನಸಿಕೊಳ್ಳುವುದಾದರೂ ಎಷ್ಟು? ಅನಂತ ಸಾಗರದ ತೆರೆಗಳಂತೆ ಒಂದರಿಂದ ಒಂದು ಬಂದೇ ಬರತೊಡಗಿದವು. ಹೀಗೆ ಚಿತ್ರಗಳನ್ನು ಕಾಣುತ್ತಿರುವಷ್ಟರಲ್ಲಿಯೇ ರಾತ್ರಿ ಹನ್ನೆರಡು ಗಂಟೆ ಮಿಕ್ಕಿ ಹೋಗಿರಬೇಕು. ಹಾಗೇ ನಿದ್ದೆಹೋಗಿ ಬಿಟ್ಟೆ.

ನಿದ್ರಾಪ್ರಾಂತ್ಯದಲ್ಲಿ ಒಂದು ಕನಸು ಕಂಡೆ. ನಾನು ನನ್ನ ಕೋಣೆಯಲ್ಲಿ ಕಣ್ಣುಗಳನ್ನು ಮುಚ್ಚಿಕೊಂಡು ಸ್ವಸ್ಥವಾಗಿ ಮಲಗಿದ್ದೆ. ಆಗ ಯಾರೋ "ಗಿರಿ! ಗಿರಿ!!" ಎಂದು ಒದರಿದರು. ಆ ಕನಸಿನಲ್ಲಿಯೇ ಕಣ್ಣು ತೆರೆದೆ. ಒಡನೆಯೇ ಬಾಲ ಸೂರ್ಯನ ಹೊನ್ನ ಕಿರಣಗಳ ಜೊತೆಗೆ ನನ್ನ ಚಿನ್ನಮ್ಮ ಒಳಗೆ ಅಡಿಯಿಟ್ಟಳು. ಆಗ ಅವಳು ಬಿಳಿಯ ಸೀರೆಯನ್ನುಟ್ಟು ಹಣೆಯಲ್ಲಿ ಕುಂಕುಮದ ತಿಲಕವನ್ನಿಟ್ಟಿದ್ದಳು. ಅವಳ ಮುಖದಲ್ಲಿ ಬೇಸರದ ಮಾಲಿನ್ಯ ಈಗ ಎಷ್ಟೂ ಇಲ್ಲ. ಜೀವನದ ಭಟ್ಟಿಯಲ್ಲಿ ಕತ ಕತನೆ ಕುದಿದು ಚೊಕ್ಕ ಚಿನ್ನವಾಗಿದ್ದೇನೆಂದು ತೋರಿಸಲು ಹಾಗಾಗಿದ್ದಳೋ ಏನೊ ಅವಳರೂಪು ಬಂಗಾರದಂತೆ ಹೊಳೆಯುತ್ತಿತ್ತು. ಅವಳ ಬಾಲ್ಯ ಜೀವನದಲ್ಲಿ ಕಂಡ ಆಕೆಯ ಸೌಂದರ್ಯದ ಮೊಳಕೆ ಈಗ ವೃದ್ಧಾಳಿದಂತೆ ಎನಿಸಿತು. ಕೈಯಲ್ಲಿ ಏನೋ ತಗೆದುಕೊಂಡು ಬಂದು,—

"ಯಾಕೆ ಗಿರಿಯಲ್ಲಾ ಇನ್ನೂ ಮಲಗಿದ್ದಿಯಾ?" ಅಂದಳು. ನಾನು ಚಟಕ್ಕನೆ ಎದ್ದು ಸವರಿಸಿಕೊಂಡು,—

"ನಿನ್ನೆರಾತ್ರಿ ನಿದ್ರೆ ಬರಲಿಲ್ಲ" ಎಂದಂದು ಅಲ್ಲಿರುವ ಕಂಚಿನ ತಂಬಿಗೆಯಲ್ಲಿಯ ನೀರಿನಿಂದ ಮುಖ ತೊಳೆದುಕೊಂಡೆ. ಮುಖ ತೊಳೆದುಕೊಂಡು ನನ್ನ ಸ್ಥಳಕ್ಕೆ ಬಂದು ಕೂಡುವಷ್ಟರಲ್ಲಿ ಚಿನ್ನಮ್ಮ ತನ್ನ ಕೈಯಲ್ಲಿಯ ತಟ್ಟೆಯನ್ನು ಬದಿಗಿಟ್ಟು ಅಲ್ಲಿರುವ ಹುಲ್ಲು ಚಾಪಿಯ ಮೇಲೆ ಕುಳಿತಿದ್ದಳು. "ಚಿನ್ನಮ್ಮ ನಮ್ಮನೆಗೆ ಬಂದಳಲ್ಲಾ" ಎನ್ನುವ ಹಿಗ್ಗಿನ ತೆರೆಗಳು ನನ್ನನ್ನು ತೇಲಾಡಿಸಿ ತೇಲಾಡಿಸಿ ಬಿಟ್ಟವು. ಆ ಹಗ್ಗಿನ ತೆರೆಯ ನೀರಿನಲ್ಲಿ ನನ್ನ ಮಾತುಗಳು ಮಿಂದು ಮಿಂದು ಉಬ್ಬಿ ಹೃದಯದಾಳವನ್ನು ಸೇರಿಕೊಂಡದ್ದರಿಂದ ಅವಳೊಡನೆ ಮಾತಾಡಲಿಕ್ಕಾಗದೆ ಮೌನವಾಗಿ ಕುಳಿತುಕೊಳ್ಳ ಬೇಕಾಯಿತು. ಆಗ ಮಂದಗಾಮಿನಿಯಾದ ನಗೆ ಗಂಗೆಯು ಒಂದೇ ಸವನೆ ಅವಳ ಮುಖದಲ್ಲಿ ಹರಿಯುತಲಿತ್ತು. ನನ್ನ ಹೃದಯದಾಳವನ್ನು ಸೇರಿದ ಮಾತು

ಗಳನ್ನು ಕಷ್ಟದಿಂದ ರಂಗಮಂಟಪಕ್ಕೆ ಹಿಡಿದೆಳೆದು ತಂದೆನಾದರೂ ಬಿಗಿದ ಕಂಠ ಮತ್ತು ನಾಲಿಗೆಗಳು ಹೊರಬರಲು ಅವಕ್ಕೆ ಆಜ್ಞೆಯನ್ನು ಕೊಡಲಿಲ್ಲ. ಆಗ ನಾನು ಬಲು ಪೇಚಾಡಿದೆ. ಕಡೆಗೆ ಕುಂಟಾಡುತ್ತ ಹೇಗೋ ಮಾತುಗಳು ಹೊರಗೆ ಬಂದವು.

"ಚಿನ್ನಮ್ಮಾ! ಯಾವಾಗ ಬಂದೆ ಎಂದು ಕೇಳಿದೆ." ?

"ಇದೇ ಈಗ" ಎಂದು ಮತ್ತೆ ನಗೆಯನ್ನರಳಿಸಿ ಚಿನ್ನಮ್ಮ ಹೇಳಿದಳು.

ಅಂತೂ ಸರಳವಾಗಿ ನಮ್ಮಿಬ್ಬರಲ್ಲಿ ಮಾತುಗಳು ಸುರುವಾದವು. ಆಗ ನಾವು ಮನಬಿಚ್ಚಿ ನಮ್ಮ ಬಾಲ್ಯಜೀವನದ ಎಲ್ಲ ಮಾತುಗಳನ್ನು ಆಡಿಕೊಂಡೆವು. ಒಮ್ಮೊಮ್ಮೆ ಅತ್ತೆವು. ಒಮ್ಮೊಮ್ಮೆ ನಕ್ಕೆವು. ಒಮ್ಮೆ ಈ ಪ್ರಪಂಚದಲ್ಲಿರುವ ಸುರಮ್ಯವನ್ನೆಲ್ಲ ಪರಿಶೀಲಿಸಿದೆವು. ಮತ್ತೊಮ್ಮೆ ಯಮಯಾತನೆಯ ಕಡೆಗೆ ದೃಷ್ಟಿಯಿಟ್ಟೆವು. ಇಷ್ಟೆಲ್ಲ ಮಾತಾಡಿ ಅವಳಿಗಾಗಿಯೇ ತಂದ ಅವಳ ಅಕ್ಕರತೆಯ ಸಾಮಗ್ರಿಗಳನ್ನು ಅವಳ ಮುಂದಿಟ್ಟು "ಚಿನ್ನಾ ನಿನ್ನ ಬಾಲ್ಯ ಜೀವನದಲ್ಲಿ ಇವುಗಳನ್ನು ನೀನು ಹೆಚ್ಚಾಗಿ ಬಯಸುತಿದ್ದಿಯಷ್ಟೆ? ಆ ನೆನಪಿಗಾಗಿಯೇ ಇವನ್ನೆಲ್ಲ ತಂದಿದ್ದೇನೆ. ತಗೆದುಕೊ." ಎಂದೆ. ಆಕೆ ಅವನ್ನೆಲ್ಲ ಒಂದೊಂದಾಗಿ ನೋಡಿದಳು. ಶೋಕ ಮತ್ತು ಆನಂದಗಳ ಮಿಶ್ರಿತವಾದ ಒಂದು ಉಸಿರನ್ನು ಕರೆದು—

"ನಿನ್ನ ಪ್ರೀತಿಯ ಕೆಲ ಒಡವೆಗಳನ್ನು ನಿನಗಾಗಿ ನಾನೂ ತಂದಿದ್ದೇನೆ. ಇಗೋ ತಗೆದುಕೊ" ಎಂದು ತನ್ನ ತಟ್ಟೆಯನ್ನು ನನ್ನೆಡೆ ಸರಿಸುವಳು. ಅದರಲ್ಲಿಯ ಹೂಗಳನ್ನು ತೋರಿಸಿ "ನಾವು ಸಣ್ಣವರಿರುವಾಗ ಇಂಥ ಹೂಗಳ ಹಾರಗಳನ್ನು ಮಾಡಿ ಕೊರಳಲ್ಲಿ ಹಾಕಿಕೊಳ್ಳಬೇಕೆಂದು ಬಯಸಿ ಅವುಗಳನ್ನು ತರುವುದಕ್ಕಾಗಿ ಏಸೋಸೋ ತೋಟಗಳನ್ನು ನೀನು ತಿರುಗುತಿದ್ದಿಯಲ್ಲ; ಆಗ ನಿನ್ನ

ಗಲ್ಲಗಳನ್ನು ಹಿಡಿದು ನಾನು ರಮಿಸುತ್ತಿದ್ದೆ. ಅದೂ ನೆನಪಿನಲ್ಲಿ ದೆಯೇ ಗಿರಿ? ಅದಕ್ಕಾಂತಲೇನೇ ಆ ಗುಡಿಯ ಉಪವನದಲ್ಲಿ ಬೆಳೆದ ಈ ಹೂಗಳನ್ನು ತಂದಿದ್ದೇನೆ. ತೆಗೆದುಕೊ. ಮತ್ತೊಮ್ಮೆ ನಾವು ತಾಯಿ ಮಕ್ಕಳಾಗಿ ಆಡುತ್ತಿದ್ದಾಗ 'ನನಗೆ ಸಜ್ಜೆಯ ರೊಟ್ಟಿ ಬೇಕು' ಎಂದು ಮೇಲೆ ಮೇಲೆ ನನ್ನಲ್ಲಿ ಹಟ ಮಾಡುತ್ತಿದ್ದಾಗ ನಾನು ತರಗೆಲೆಗಳನ್ನು ಕೊಟ್ಟು ನಿನ್ನನ್ನು ಸಂತವಿಸುತ್ತಿದೆ ಅದು ನಿನಗೆ ನೆನಪಿದೆಯೆ ಗಿರಿ? ಅದಕ್ಕಾಂತಲೇನೇ ನಿನ್ನ ಪ್ರೀತಿಯ ಎಳ್ಳು ಹಚ್ಚಿದ ಸಜ್ಜೆಯ ರೊಟ್ಟಿಯನ್ನು ತಂದಿದ್ದೇನೆ. ಆ ತರಗೆಲೆಯ ರೊಟ್ಟಿಗೆ ಇವು ಸಾಟಿಯಾಗಿರದಿದ್ದರೂ ನಿನ್ನ ಪ್ರೀತಿಯವೆಂದು ತಂದಿದ್ದೇನೆ ತಗೆದುಕೊ " ಎನ್ನುತ್ತ ತಂದ ಸಾಮಾನುಗಳನ್ನೆಲ್ಲ ಒಂದೊಂದಾಗಿ ಒಪ್ಪಿಸಿದಳು. ಆಗ ನಾನು ಏನೇನೋ ಮಾತಾಡಿದೆ. ಅದು ನನ ಗೀಗ ನೆನಪಿಲ್ಲ. ಕಡೆಗೆ ಚಿನ್ನಮ್ಮ—

"ಆಯ್ತು ಗಿರಿ! ಬಾಲ್ಯ ಜೀವನವನ್ನು ಎಷ್ಟು ನೆನಿಸಿ ಕೊಂಡರೂ ಕಡಿಮೆಯೆ! ನಾವು ವಯಸ್ಸಿಗೆ ಬಂದ ಹಾಗೆಲ್ಲ ಸಮೀ ಪದಲ್ಲಿದ್ದ ನಮ್ಮ ಮೊದಲಿನ ಹೃದಯಗಳು ಈಗ ಬಹು ದೂರವಾಗಿ ಬಿಟ್ಟವೆ. ಅಂದಿನ ಆ ನಮ್ಮ ಸಖ್ಯಹೋಗಿ ಇಂದು ನೀನೊಬ್ಬ ಗೃಹಸ್ಥನಾಗಿರುವಿ ನಾನೊಬ್ಬ ಗೃಹಿಣಿಯಾಗಿದ್ದೇನೆ. ನಾವೆಷ್ಟೇ ನಿರ್ಮಲಾಂತಃಕರಣವುಳ್ಳವರಾಗಿದ್ದರೂ ಈ ಕಟ್ಟನ್ನು ಮೀರಿ ನಡೆ ಯಲು ನಮಗಿನ್ನು ಸಾಧ್ಯವಿಲ್ಲ. ಸಮಾಜವು ಇಂಥ ಬಂಧನವನ್ನೇ ಹಾಕಿಟ್ಟಿದೆ, ಭೆಟ್ಟಿಯ ದೆಸೆಯಿಂದ ನಮ್ಮ ಹೃದಯಗಳು ಎಷ್ಟು ತವಕಿಸಿದರೂ ಈ ಜನ್ಮದಲ್ಲಿ ಇನ್ನು ಸಾಧ್ಯವೋ ಇಲ್ಲವೋ ನಾ ಹೇಳ ಲಾರೆ. ಯಾಕೆಂದರೆ ನೀನೊಬ್ಬ ಗೃಹಸ್ಥ! ನಾನೊಬ್ಬ ಗೃಹಿಣಿ!" ಎಂದು ಚಿನ್ನಮ್ಮ ತನ್ನ ಮಾತನ್ನು ಮುಗಿಸಿ "ಆಯ್ತು ಗಿರಿಮಾಲ್ಲಾ! ನಾನಿನ್ನು ಹೋಗಿಬರುತ್ತೇನೆ. ಇನ್ನಿಷ್ಟು ತಡೆದರೆ ಬಿಸಿಲು ಬಹಳ ವಾಗುವುದು. ನನ್ನ ಹಿರಿಯ ಕಾಹಿಲೆಯಿಂದ ಗುಡಿಯಲ್ಲಿ ಮಲಗಿ ದ್ದಾನೆ. ಬೇಗ ಅಪ್ಪಣೆಯನ್ನು ಕೊಡು'' ಎನ್ನುತ್ತ ಹೊರಟು

ನಿಂತಳು. ನಿರ್ವಾಹವಿಲ್ಲದೆ ಅವಳಿಗೆ ಅಪ್ಪಣೆಯನ್ನು ಕೊಡ ಬೇಕಾಯಿತು.

ಆದರೆ "ಅಯ್ಯೋ ಇದೆಲ್ಲ ಕನಸು!" ಎಂದು ನಾನು ಗಡಬಡಿಸಿಕೊಂಡು ನಿರಾಶೆಯಿಂದೆದ್ದೆನು. ಎದ್ದು ಬಾಗಿಲಕಡೆ ನೋಡುವಷ್ಟರಲ್ಲಿ ನನ್ನ ನಿರಾಶೆಯನ್ನು ಕೊಚ್ಚಿಕೊಂಡು ಹೋಗುವ ಸಾಗರದ ಥೆರೆಯಂತೆ ಅವಸರದಿಂದ ಚಿನ್ನಮ್ಮನು ಇತ್ತಕಡೆಗೇ ಹೊರಟಿರುವುದು ಕಣ್ಣಿಗೆ ಬಿತ್ತು. ಆಗಿನ ನನ್ನ ಆನಂದಕ್ಕೆ ಅಳವೆ?



# ಯಾರ ತಪ್ಪಿನ ಫಲ?

**ರಾ**ಯರ ಹೆಸರು ರಾಮಣ್ಣನವರು. ಅವರು ಸ್ಥಿತಿವಂತರಿದ್ದಂತೆ ತುಂಬಾ ಜಾಣರೂ ಹೌದು. ಅವರಿಗೀಗ ಅರವತ್ತು ವರುಷ ವಯಸ್ಸು. ವರುಷ ಅರವತ್ತಾದರೂ, ಶಕ್ತಿ ಪ್ರಾಯದ್ದು. ಅವರ ನರೆತ ಕೂದಲೊಡನೆ ವಿಚಾರವು ಹಣ್ಣಿತ್ತಾದರೂ ಒರೆಗೆ ಹಿಂಜರಿಯುತ್ತಿತ್ತು. ವಿಚಾರವೆಂದರೆ ಮುದಿ ವಿಚಾರವಲ್ಲ, ನವವಿಚಾರ. ಮೊಗ ಮೀಸೆ ಬಾರದ ತರುಣರಿಗಿಂತ ಒಂದು ಹೆಜ್ಜೆ ಮುಂದೇ ಎನ್ನಬೇಕು, ಇವರ ವಿಚಾರ. ಇವರಿಗೆ ಗಂಡಸು ಮಕ್ಕಳಿರಲಿಲ್ಲ, ಒಬ್ಬ ಮಗಳೇ ಇವರ ಜೀವನದ ಸರ್ವಸ್ವ. ಅಂತು ಅವರ ಮನೆಯಲ್ಲಿ ಅವರು, ಅವರ ಹೆಂಡತಿ, ಮಗಳು ಮತ್ತು ಸಾಕಿದ ಒಬ್ಬ ಮಗ ಹೀಗೆ ನಾಲ್ಕೇ ನಾಲ್ಕು ಜನರು.

ಮಗಳಿಗೀಗ ೨೦—೨೫ ವರ್ಷ ವಯಸ್ಸು. ತುಂಬಾ ಯವ್ವನೆ. ತಕ್ಕಷ್ಟು ಸುಂದರಿ. ಆದರೇನು! ಎಂಥ ಚೆಲುವಾದ ಹೂ ಇದ್ದರೇನು? ಅದನ್ನು ನೋಡಿ ಆಹ್ಲಾದಬಟ್ಟು ಬಣ್ಣಿಸುವ ಕವಿಯಿಲ್ಲದಲ್ಲಿ!! ಶಿರದಲ್ಲಿ ಧರಿಸುವ ದೇವನಿಲ್ಲದಲ್ಲಿ!!! ಈ ಮನಮೋಹಕವಾದ ಪುಷ್ಪವನ್ನು ತನ್ನ ಕೋಮಲವಾದ ಕರತಲಗಳಲ್ಲಿ ಎತ್ತಿ ಮೋದಪಡುವ ಆಕೆಯ ಕವಿ! ಶಿರದಲ್ಲಿ ಧರಿಸಿ ಕುಣಿದಾಡುವ ಆಕೆಯ ದೇವಾದಿ ದೇವ!! ಇದನ್ನೊಂದೂ ಮಾಡದೆ ಅವಳನ್ನಗಲಿ ಇಂದಿಗೆ ಹತ್ತುವರುಷಗಳಾದವು. ತನ್ನ ಭಾಗ್ಯದ ನಿಧಿಯನ್ನು ಕಳೆದುಕೊಂಡ ಆಕೆ ಈಗ ಸಾವಕಾಶವಾಗಿ ತನ್ನ ನೋವನ್ನು ಮರೆಯುತ್ತಿದ್ದಾಳೆ. ಆದರೂ ಸಂಪೂರ್ಣ ಹೇಗೆ ಮರೆತಾಳು ಬಾಳಿನ ಬೇರೇ ಕತ್ತರಿಸಿರುವಾಗ!

ತನ್ನ ದುರ್ಭಾಗ್ಯವೆಲ್ಲ ನೆನಪಾದಾಗ ಕೋಡಿಕೋಡಿಯಾಗಿ ಕಣ್ಣೀರನ್ನು ಸುರಿಸುವಳು. ಕಡೆಗೆ ತನಗೆ ತಾನೇ ಧೈರ್ಯತಂದು "ಅಯ್ಯೊ, ಮಾಡುವುದೇನು? ದೈವವನ್ನು ಮೀರುವವರಾರು?" ಎನ್ನುವಳು.

ರಾಮಣ್ಣನವರಿಗೆ ಅವಳ ಮುಖವನ್ನು ನೋಡಿದಾಗೆಲ್ಲಾ ಎಷ್ಟು ಕಸವಿಸಿ! ಎಷ್ಟು ಕಾತರ!! ಅವರ ಸ್ಮರಣೆ ಮೀರದ ದಿನವೇ ಇಲ್ಲವೆನ್ನಬೇಕು. ಆಗ ಯಾರೂ ನೋಡದಂತೆ ಕಣ್ಣೀರನ್ನು ಕರೆದು ಒಲ್ಲಿಯಲ್ಲಿ ಒರಿಸಿಬಿಡುವರು. "ಇವಳ ಬಾಳ್ವೆಯ ಬಳ್ಳಿಗೆ ಯಾವ ತಂಪು ನೀರು ಚೇತನಗೊಳಿಸಬೇಕು?" ಎನ್ನುತ್ತ ಮೈಮರೆಯುವರು. ಹೀಗೆ ಮೈಮರೆತಾಗಲೆಲ್ಲ "ಮತ್ತಾವದಾದರೊಂದು ಸುಂದರವಾದ ಹಂದರಕ್ಕೆ ಇವಳ ಬಾಳ್ವೆಯ ಬಳ್ಳಿಯನ್ನು ಏಕೆ ಹಬ್ಬಿಸಬಾರದು? ಎಂದುಕೊಳ್ಳುವರು. ಸಮಾಜವು ನನಗೇನು ಮಾಡುವುದು? ಅಬಲೆಯರ ನೋವು ಏನುಗೊತ್ತು ಅದಕ್ಕೆ? ಕುರುಡಾಗಿ ಕುಳಿತಿರುವಾಗ?? ನಾನಿನ್ನು ಸರ್ವಥಾ ಲೆಕ್ಕಿಸಲಾರೆ. ಒಳ್ಳೆಯ ವರನನ್ನು ಹುಡುಕಿ ಈ ನನ್ನ ಕರುಳಿನ ಹಾರವನ್ನು ಅವಳ ಕೊರಳಿಗಿಕ್ಕುವೆನು. ಕೊರಳಿಗಿಕ್ಕಿ ನನ್ನ ನಿಸ್ತೇಜವಾದ ಕಣ್ಣುಗಳನ್ನು ತೃಪ್ತಪಡಿಸುವೆನು." ಎಂದೆಂದು ಉಬ್ಬಿ ಏಳುವರು. ಎದ್ದು ಹೊರಟು ನಿಲ್ಲುವರು. ಸ್ವಲ್ಪ ಶಾಂತವಾಗಿ ಸಮಾಜ, ಬಹಿಷ್ಕಾರ, ಆಚಾರ್ಯರು ಎಲ್ಲಾ ಕಣ್ಣೆದಿರಿಗೆ ಬಂದಾಗ ತುಂಬಾ ಕುಸಿದು ಬೀಳುವರು. ಕುಸಿದು ಬಿದ್ದು ನೀಳವಾದ ಉಸಿರು ಗರೆಯುವರು. ಪಾಪ! ಅವರು ಎಷ್ಟು ಹೊಸ ವಿಚಾರದವರಾದರೇನು? ಸಮಾಜದ ಈ ಬಲವಾದ ಸಂಕೋಲೆಯನ್ನು ಹರಿದುಕೊಂಡು ಹೋಗುವ ಶಕ್ತಿ ಎಲ್ಲಿಂದ ಬರಬೇಕು?

ಹೀಗೆ ಅವರ ಮಗಳು ಕುಸುಮಕ್ಕ ಎಷ್ಟೋದಿನ ಕಳೆದಳು. ದಿನ ಕಳೆದ ಹಾಗೆಲ್ಲಾ ಮನೆಯ ವ್ಯವಸ್ಥೆಯನ್ನು ಅವಳೇ ಮಾಡಹತ್ತಿದಳು. ಜಾಣಾಕ್ಷಳಾದ್ದರಿಂದ ಅವಳಿಗೇ ಸಂಪೂರ್ಣ ಅಧಿಕಾರವನ್ನು ರಾಮಣ್ಣನವರು ಕೊಟ್ಟುಬಿಟ್ಟದ್ದರಿಂದ ಮನೆಯ ವ್ಯವಹಾರ, ಹೊಲಗಳ ವ್ಯವಹಾರ,ಅಲ್ಲದೆ ಬೇರೆ ಕೊಡಕೊಳ್ಳುವ ವ್ಯವಹಾರವನ್ನೆಲ್ಲಾ ಅವಳೇ

ಮಾಡಬೇಕಾಯಿತು. ಸತ್ಯವಂತಿಕೆ, ಬಡಬಗ್ಗರ ಮೇಲೆ ದಯಾ ದೃಷ್ಟಿ ಈ ಮೊದಲಾದ ಸುದ್ಗುಣಗಳಿಂದ ಕುಸುಮಕ್ಕನ ಹೊಗಳಿಕೆಯು ಊರುತುಂಬೆಲ್ಲಾ ಏಕೆ, ಸುತ್ತು ಮುತ್ತಿನ ಹಳ್ಳಿಗಳವರೆಗೂ ಹಬ್ಬಿತು. ಎಲ್ಲರ ಬಾಯಿಯಲ್ಲಿ ಕುಸುಮಕ್ಕನೇ ಕುಸುಮಕ್ಕ! ಅವಳದೇ ಹೊಗಳಿಕೆ 'ರಾಮಣ್ಣನವರಿಗೆ ಗಂಡಸು ಮಕ್ಕಳಿಲ್ಲವಾದರೆ ಬಿಡಲಿ, ಪುತ್ರಿರತ್ನವಾದರೂ ಇದೆಯಲ್ಲಾ!' ಎನ್ನುವರು.

ಅವಳಿಗೆ ಓದು ಬರಹ ಚೆನ್ನಾಗಿ ಬರುತ್ತಿತ್ತು. ಪುರಾಣ ಪುಣ್ಯ ಕಥೆಗಳನ್ನೂ, ಮತ್ತೆ ಬೇರೆ ಪುಸ್ತಕಗಳನ್ನೂ ಬಿಡುವಿದ್ದಾಗೆಲ್ಲ ಓದುವಳು. ಮನನ ಮಾಡುವಳು. ತನ್ನ ಹೊಯ್ದಾಡುವ ಬಾಳುವೆಯನ್ನು ಸರಿಪಡಿಸಿ ಸ್ಥಿತಿಗೆ ತರುವಳು. ವ್ರತೋಪವಾಸ, ಪೂಜೆ ಪುನಸ್ಕಾರಗಳ ಕಡಗೆ ಹೊರಳುವಳು. ಆದರೂ ದಾಂಪತ್ಯ ಸುಖಕ್ಕಾಗಿ ಅವಳ ಮನವು ಎಂದೂ ಎಷ್ಟೂ ಶಾಂತವಾಗಿರಲಿಲ್ಲ. ಅದು ಒಳಗೊಳಗೆ ಕೊರೆಯುತ್ತಲೇ ಇತ್ತು. ಅದಕ್ಕಾಗಿ ಅವಳು ಬಹಳ ಮರುಗುತ್ತಿದ್ದಳು. "ದೇವಾ! ನನ್ನ ಮನಸ್ಸನ್ನು ಶಾಂತವಾಗಿಡು. ಇಂದ್ರಿಯಗಳು ಕೆರಳದಂತೆ ಮಾಡು. ಕಳೆದು ಹೋದ ವಸ್ತುವಿಗಾಗಿ ಏಕೆ ಆಶೆಪಡುತ್ತಿವೆ ನನ್ನ ಮನ? ನೋಡು! ನನ್ನನ್ನು ಮಾನದಿಂದ ಕಾಯಿ. ನನ್ನ ಎಲ್ಲ ಭಾರ ನಿನ್ನ ಕೈಯ್ಯಲ್ಲಿದೆ" ಎಂದು ಆಗಾಗ್ಗೆ ದೇವರಲ್ಲಿ ಬೇಡಿಕೊಳ್ಳುವಳು.

ರಾಮಣ್ಣನವರಿಗೆ ಸಾಕು ಮಗನೊಬ್ಬನಿರುವನೆಂದು ಹೇಳಿದೆಯಷ್ಟೆ? ಅವನಿಗೂ ಈಗ ೨೫ ವರುಷ. ಬೀಸಾದ ಆಳು. ಬಲವಾದ ಮೈ. ದುಂಡ ಮೋರೆ. ತಕ್ಕ ರೂಪು. ಅವನ ತಾಯಿ ತಂದೆ ಯಾರೋ ಏನೋ ಯಾರಿಗೂ ಗೊತ್ತಿಲ್ಲ. ಸುಮಾರು ನಾಲ್ಕು ವರ್ಷ ವಯಸ್ಸಿರುವಾಗ ಜಾತ್ರೆಗೆ ಬಂದವರಾರೋ ಅವನನ್ನು ಕಳೆದುಕೊಂಡು ಹೋಗಿದ್ದರಂತೆ. ಅಳುತ್ತಾ ತಿರುಗುವ ಕೂಸನ್ನು ಮಕ್ಕಳಿಲ್ಲದರಾಮಣ್ಣನವರೇ ಸಾಕಿ, ಸಲುಹಿ, ಬೆಳೆಸಿ ದೊಡ್ಡವನನ್ನಾಗಿ ಮಾಡಿದರು. ವಯಸ್ಸಿಗೆ ಬಂದಾಗಿನಿಂದಲೂ ತೋಟದ ಕೆಲಸವನ್ನು ಆತನೇ

ಮಾಡುತ್ತಿದ್ದನು. ಆತನು ಬಹಳ ಸದ್ಗುಣಿ. ಓದು ಬರಹ ಕಲಿಯದಿದ್ದರೂ ನೀತಿ ನಡತೆಗಳನ್ನು ಚೆನ್ನಾಗಿ ಬಲ್ಲ. ಪುರಾಣ ಕೀರ್ತನೆಗಳಿಗೆ ಆತನು ಎಂದೂ ತಪ್ಪಿದವನಲ್ಲ. ಹೇಳುವವರ ಗುಣದ ಕಡೆಗೆ ಆತನ ಲಕ್ಷ್ಯವಿರುತ್ತಿರಲಿಲ್ಲ; ಏನು ಹೇಳುವರೋ ಎನ್ನುವುದರ ಕಡೆಗೇ ಆತನ ದೃಷ್ಟಿ. ಆತನ ಲಗ್ನಮಾಡಬೇಕೆಂದು ರಾಮಣ್ಣನವರು ಎಷ್ಟೋ ಪ್ರಯತ್ನಿಸಿದರು. ಆದರೆ ಯಾರು ಕೊಡಬೇಕು ಹೆಣ್ಣು! ಕುಲ ಜಾತಿಗಳನ್ನು ಕೇಳುವ ಕುರುಡ ಸಮಾಜವು ನೀತಿ ಶೀಲಗಳ ಕಡೆಗೆ ನೋಡುತ್ತಿದೆಯೇ? ಹೆಣ್ಣು ಕೊಡಬಂದವರೆಲ್ಲ "ವರನೇನೋ ಚೆನ್ನಾಗಿದ್ದಾನೆ. ಕುಲವ್ಯಾವುದು? ತಂದೆತಾಯಿ ಯಾರು?" ಎಂದು ಪ್ರಶ್ನೆ ಮಾಡಿ, ಮೋರೆ ತಿರುವಿ ಬಿಡುವರು. ಇದನ್ನೆಲ್ಲಾ ಕಂಡು ಸುಗುಣನು ಮನದಲ್ಲಿ ಬಹಳ ಮಿಡುಕುವನು. ಒಮ್ಮೊಮ್ಮೆ "ನನಗೆ ಲಗ್ನವೇ ಬೇಡ. ಸಾಯುವವರೆಗೆ ಮದುವೆಯಾಗದೆ ಸಾಕಿ ಸಲುಹಿ ದೊಡ್ಡವನನ್ನಾಗಿ ಮಾಡಿದ ರಾಮಣ್ಣನವರ ಸೇವೆ ಮಾಡುವೆನು. ಅದರಿಂದಲೇ ನನ್ನ ಕೀರ್ತಿ, ಮುಕ್ತಿ" ಎಂದು ರಾಮಣ್ಣನವರಿಗೇ ಈ ಮಾತು ಹೇಳಿಬಿಡಬೇಕೆನ್ನುವನು. ಧೈರ್ಯ ಸಾಲದಿರಲು ಹೇಳಹೋದವನು ತಿರುಗಿ ಬರುವನು.

ಇಂದು ಕುಸುಮಕ್ಕ ತೋಟಕ್ಕೆ ಹೋಗಿದ್ದಾಳೆ. ತೋಟದಲ್ಲಿ ಸುಗುಣನೊಬ್ಬನೇ ಇದ್ದಾನೆಂದು ಅಲ್ಲಿಗೆ ಅವಳು ಹೋದವಳಲ್ಲ. "ಬಹಳ ದಿನವಾಗಿದೆ ತೋಟ ನೋಡಿಲ್ಲ, ನೋಡಬೇಕು." ಎಂದು ಹೋದವಳು, ಸುತ್ತೆಲ್ಲ ನೋಡಿಕೊಂಡು ಮೆಟ್ಟಿಗೆಯ ಕಡೆಗೆ ಬಂದಾಗ ಸುಗುಣನು ಗುಡಿಸಲು ಮುಂದೆ ಕುಳಿತು ಏನೋ ಕೆಲಸ ಮಾಡುತ್ತಿದ್ದನು. ಕುಸುಮಕ್ಕನ ದೃಷ್ಟಿಯು ಒಮ್ಮೆಲೆ ಅವನ ಮುಖದ ಕಡೆ ಹೋಯಿತು. ಅಂದೇ ಮೋರೆಗಷ್ಟ ಮಾಡಿಸಿಕೊಂಡ ಆತನ ಲಸಲಸಿತ ಮುಖವು ನಿರಭ್ರವಾದ ಆಕಾಶದಲ್ಲಿಯ ಹುಣ್ಣಿಮೆಯ ಚಂದ್ರನಂತೆ ಕಂಡಿತು. ಒಗೆಸಿದ ಶುಭ್ರವಾದ ಅಂಗಿಯನ್ನು ಹಾಕಿಕೊಂಡಿದ್ದರಿಂದ ಮುಖಚಂದ್ರನ ಚಂದ್ರಿಕೆಯು ಹಾಲಹಳ್ಳಾಗಿ

ಹರಿಯುತ್ತಿರುವಂತೆ ಅನಿಸಿತು. ಒಮ್ಮೆಲೆ ಜುಮ್ಮೆಂದಿತು ಆಕೆಯ ಮೈ. ಕಾಮನಕುಸುಮಬಾಣಗಳು ಯಾವಮಾಯೆಯಿಂದಲೋ ಆಕೆಯನ್ನು ಆವರಿಸಿ ಬಿಟ್ಟವು. ಮೈ ಬೆವರೊಡೆಯಿತು. ತಾಳ್ಮೆಗೆಟ್ಟಿತು. ತನ್ನ ಮನವನ್ನು ಬಿಗಿ ಹಿಡಿಯಲು ಸರ್ವ ಪ್ರಯತ್ನವನ್ನೆಲ್ಲಾ ಮಾಡಿದಳು. "ಅಯ್ಯೋ ನಾನು ಹಾಳುಭಾವಿಯಲ್ಲಿ ಬೀಳುತ್ತಿರುವೆನಲ್ಲಾ!" ಎಂದು ಕೊಂಡಳು. "ಇದು ತಕ್ಕ ಕಾರ್ಯವಲ್ಲಾ" ಎಂದು ಬಗೆದಳು. ಆದರೇನು, ಆಕೆಯಲ್ಲಿಯ ಸುಪ್ತ ಕಾಮಾಗ್ನಿಯ ಜ್ವಾಲೆಯು ಅವಳ ದೇಹವನ್ನು ಒಂದೆ ಸವನೇ ಸುಡಹತ್ತಿರುವಾಗ ಅವಳ ನಿಗ್ರಹದ ನೀರು ಉಪಯೋಗವಾಗಬೇಕು ?

ಅವಳು ಸಮಾಜ ಶಾಸನದ ಉಗ್ರತೆಯನ್ನು ನೆನಪಿಗೆ ತಂದು ಕೊಂಡು ಮನವನ್ನು ಎಷ್ಟೇ ಮರೆಸಿದಳಾದರೂ ಮುಖದ ಮೇಲಿನ ಭಾವದ ಸುಳಿಗಳನ್ನು ಅಳುಕಿಸಲು ಅವಳಿಂದಾಗಲಿಲ್ಲ. ಎಂದೂ ಇಲ್ಲದ ಈ ತರಹದ ಅವಳ ರೀತಿಯು ಸುಗುಣನ ಮನದಲ್ಲಿ ಕಾಮದ ಛಟಗಳನ್ನು ಎಬ್ಬಿಸದೆ ಇರಲಿಲ್ಲ. ಆಕೆಯ ಮುಖ ಸಂದರ್ಶನವಾದಾಗ ಪ್ರಾಯಕ್ಕೆ ತಕ್ಕಂತೆ ಅಂಥ ಭಾವಗಳು ಆತನ ಮನದಲ್ಲಿ ಏಳದೆ ಬಿಡಲಿಲ್ಲ. ಆಗ ಆತನೂ ಸಾಮಾಜಿಕ ನೀತಿಯ ಬಂಧನದಿಂದ ಅವನ್ನು ಬಂಧಿಸಲೆಳಿಸಿದನು. ಆದರೆ ಯಾರೂ ಇಲ್ಲದ ಸ್ಥಳದಲ್ಲಿ ಇಂದು ಕುಸುಮಕ್ಕನ ಕುಸುಮ ಬಾಣಗಳು ಅವನ್ನೆಲ್ಲ ಕತ್ತರಿಸಿ ಒಗೆದವು ಕೊನೆಗೆ ಅವರ ಮನದ ಬಂಧನವು ಬಹುದಿನಗಳಹಾಗೆ ಇಂದು ಬಂಧಿಸಲಿಕ್ಕೆ ಸಮರ್ಥವಾಗಲಿಲ್ಲ.

× × × ×

ಆದರೆ ಹಿಂದೆ ಹಸನ್ಮುಖಿಯಾಗಿದ್ದ ಕುಸುಮಕ್ಕ ಈಗ ಯಾರಿಗೂ ಅರಿಯದಂತೆ ಅಳುವುದೇ ತನ್ನದೊಂದು ಕೆಲಸ ಮಾಡಿ ಕೊಂಡು ಬಿಟ್ಟಿದ್ದಾಳೆ. ತನ್ನ ಕೋಣೆಯನ್ನು ಬಿಟ್ಟು ಆಕೆ ಎಲ್ಲಿಯೂ ಹೋಗಳು. ಮನೆಯ ಯಾವ ವ್ಯವಹಾರವನ್ನೂ ಮಾಡಳು. ಅಳುವಳು. ಬಿಕ್ಕಿಬಿಕ್ಕಿ ಅಳುವಳು. "ನಾನು ಪಾಪಮಾಡಿದೆನಲ್ಲಾ!" ಎಂದು ಹೊರಳುವಳು, "...........ನಾನು ಪಾಪ ಮಾಡಿದೆನೆ?"

ನಿಶ್ಚಯವಾಗಿಯೂ ನಾನು ಪಾಪಮಾಡಿದೆನೆ?? ಹೊರಲಾರದ ಹೊರೆ ನನ್ನಂಥ ಅಬಲೆಯ ತಲೆಯಮೇಲೆ ಹೊರಿಸಿರುವಾಗ ನಾನೇನು ಮಾಡಲಿ? ಹೊರಲು ಶಕ್ತಿಯಿಲ್ಲದ್ದೂ ನನ್ನ ತಪ್ಪೆ? ಶಕ್ತಿಯಿಲ್ಲದೆ ಮುಗ್ಗರಿಸಿದೆ ಅದಕ್ಕೆ ನಾನೇನು ಮಾಡಲಿ? ಶಕ್ತಿಯನ್ನು ನೋಡಿ ಸಮಾಜವು ಹೊರೆಯನ್ನು ಹೊರಿಸಬೇಕು. ಇಲ್ಲವೆ ಹೊರೆಹೊರುವ ಶಕ್ತಿಯನ್ನಾದರೂ ದೇವರು ಕೊಡಬೇಕು. ಅವೆರಡೂ ಇಲ್ಲದಾಗ ಯಾರ ತಪ್ಪು. ನನ್ನದೆ?? ಈ ನಿಯಮ ದೇವನದೆ? ಶಾಸ್ತ್ರಗಳು ಹೀಗೆಯೇ ಹೇಳುವವೆ?? ತಾನು ಗಂಡನೆಂದು ಹೇಳಿಕೊಳ್ಳುವ ಮೀಸೆ ಹೊತ್ತಗಂಡಸು ಹೆಂಡತಿ ಸತ್ತರೆ ಒಂದಲ್ಲ, ಎರಡಲ್ಲ ಹತ್ತಾರು ಹೆಂಡರನ್ನು ಮಾಡಿಕೊಳ್ಳುವ ಅಧಿಕಾರ ಅವನಿಗಿರಬೇಕು. ಅಬಲೆ ಎನಿಸಿಕೊಳ್ಳುವ ಹೆಂಗಸಿಗೆ, ಹಾಲಗಲ್ಲ ಕರಗಿರದಿದ್ದರೂ ತಲೆ ಮುಂಡನ ಮಾಡಿಕೊಂಡು, ಕಣ್ಣೀರಿಡುತ್ತ ಅಗ್ಗಿಯಲ್ಲಿ ಜೀವನ ಸಾಗಿಸಬೇಕು. ಇದು ದೇವರಿಗೆ ಸಮ್ಮತವೆ? ಇದು ನ್ಯಾಯವೆಂದು ಆತನು ತಿಳಿಯುವನೆ?? ಅದು ನ್ಯಾಯವಾಗಿರುವಾಗ ಕೈಮೀರಿ ಹೋಗಿರುವ ಈ ಕೆಲಸವಾದರೂ ಏಕೆ ನ್ಯಾಯವಾಗಬಾರದು?' ಎಂದು ಅಂದುಕೊಂಡು ಸಮಾಧಾನ ಹಚ್ಚಿಕೊಳ್ಳುವಳು.

ಈಗ ಕುಸುಮಕ್ಕ ಬಸುರಿ. ಅವಳ ಬಸರು ಬೆಳೆದ ಹಾಗೆಲ್ಲ ಅವಳ ಚಿಂತೆಯು ವಡವಾನಲವಾಗಿ ಅವಳನ್ನು ಸುಡತೊಡಗಿತು. ಸಾವಕಾಶವಾಗಿ ಗರ್ಭಧಾರಣದ ಲಕ್ಷಣವು ತೋರಹತ್ತಿದ್ದರಿಂದ ಎಲ್ಲಿ ಜನರಿಗೆ ಗೊತ್ತಾಗುವುದೋ, ಎಂದು ಎದೆಯೊಡೆದುಕೊಂಡು ಕೋಣೆಯನ್ನೇ ಹಿಡಿದಳು. ಆತ್ಮಹತ್ಯೆಮಾಡಿಕೊಳ್ಳಲು ಎಷ್ಟೋ ಪ್ರಯತ್ನಿಸಿದರೂ ಸಾಧಿಸದಿರಲು ತಾಯಿಗೆ ಶರಣುಹೋದಳು. ತಾಯಿ ಇದನ್ನು ಕೇಳಿ ಗಾಬರಿಯಾದಳು. ಇನ್ನೇನು ಗತಿ? ಹೇಗಾದರೂ ಮಾಡಿ ಇದನ್ನು ಮುಚ್ಚಿ ಬಿಡಬೇಕೆಂದು ಬಗೆದು ರಹಸ್ಯವಾಗಿ ಹಲಕೆಲವರಿಗೆ ಕೇಳಿ ಔಷಧವನ್ನು ಸಂಗ್ರಹಿಸಿದಳು. ಇಷ್ಟೊತ್ತಿಗೆ ಮತ್ತೆ ಕೆಲವು ತಿಂಗಳುಗಳು ಗತಿಸಿದವು. ಔಷಧಕ್ಕೆ

ಹತ್ತಿಪ್ಪತ್ತೇಕೆ ನೂರಾರು ಖರ್ಚಾಗಿರಬಹುದು. ವಿಧಾನದಂತೆ ಅವಳಿಗೆ ಅದನ್ನೂ ಕೊಟ್ಟುಬಿಟ್ಟಳು. ಅದನ್ನು ಕೊಟ್ಟ ವೈದ್ಯರು ಹೊಟ್ಟೆಯಲ್ಲಿಯೇ ಕೂಸು ಕರಗಿ ಹೋಗುವುದೆಂದು ಹೇಳಿದ್ದರಂತೆ. ಹಾಗೆ ಆಗಿದ್ದರೆ ಈ ಕತೆಗೆ ಅಸ್ತಿತ್ವವೇ ಇರುತ್ತಿರಲಿಲ್ಲ. ಕುಸುಮಕ್ಕ ಘೋರವಾದದ್ದೊಂದು ದುಃಖಸಾಗರದಲ್ಲಿ ಈಜಬೇಕಾಗಿರುವುದರಿಂದ ಅವಳ ದುರ್ದೈವವು ರಾಮಣ್ಣನವರ ಕಣ್ಣುಕಾಣುವಂತೆ ಈ ನಾಟಕ ವನ್ನು ರಚಿಸಿರಬೇಕು.

ರಾತ್ರಿ ಅದೇ ಒಂಬತ್ತು ಗಂಟೆಯಾಗಿರಬಹುದು. ಹೊರಗಿನಿಂದ ಏನನ್ನೊ ವಿಚಾರಿಸುತ್ತ ಮನೆಗೆ ಬಂದವರೇ ಕಟ್ಟೆಯನ್ನು ಹತ್ತಿದರು. ಈ ಆರು ತಿಂಗಳಿಂದಲೂ ಬಿಚ್ಚದ ತಮ್ಮ ರುಮಾಲ ವನ್ನು ಸಾವುಕಾಶವಾಗಿ ತೆಗೆದು ಗೂಟಕ್ಕಿಟ್ಟು ಅಲ್ಲಿದ್ದ ಒಂದು ದಿಂಬಕ್ಕೆ ಹೀಗೆ ಆತು ಕುಳಿತನು. ಆಗ ನಿಶ್ಶಬ್ದತೆಯೇ ರಾಜ್ಯವಾಳು ತ್ತಿದ್ದ ಆ ಮನೆಯಲ್ಲಿ ಯಾವ ಕಾರಣದಿಂದಲೋ ಏನೋ, ಮಂದ ಮಂದವಾಗಿ ಉರಿಯುತ್ತಿದ್ದ ದೀವಿಗೆಯ ಬೆಳಕಿನಲ್ಲಿ ರಾಯರ ಮುಖವು ಅಸ್ಪಷ್ಟವಾಗಿ ಕಾಣಿಸುತ್ತಿದ್ದಿತಾದರೂ ಓತಪ್ರೋತವಾಗಿ ಹೊಯ್ದಾಡುವ ಅವರ ಮುಖದ ಭಾವವು, ನೋಡುಗರ ಹೃದಯ ವೇದಿಕೆಯನ್ನು ಮುಟ್ಟದೆ ಇರುತ್ತಿರಲಿಲ್ಲ. ಅಗಲವಾದ ಮುಖದಲ್ಲಿ ಆಳವಾದ ವಿಚಾರವೊಂದು ಮಡುವಾಗಿ ಮಡುಗಟ್ಟಿತು. ಅವರ ವಿಚಾರ ವೇದಿಕೆಯಲ್ಲಿ ಈ ಚದರಂಗದ ಆಟವನ್ನು ಅವರ ಹೊಟ್ಟೆಯ ಪಾಡುಹೂಡಿದ್ದಿಲ್ಲ. ಏಕೆಂದರೆ ಅವರು ತಮ್ಮ ಜೀವನದ ನಿಶ್ಚಿತ ದೆಶೆಗೆ ಬಂದು ಎಷ್ಟೋ ದಿನಗಳು ಸಂದಿದ್ದವು.

ಹೀಗೆ ರಾಯರು ತಮ್ಮ ವಿಚಾರದಲ್ಲಿ ಒಮ್ಮೆ ಆಳವಾಗಿ ಮುಳುಗುವರು. ಮತ್ತೊಮ್ಮೆ ಬೇಗನೆ ಕೊನೆಮುಟ್ಟಬೇಕೆಂದು ಧಡಪಡಿಸುವರು. ಮಗದೊಮ್ಮೆ ನೇರವಾಗಿ ಈಜುವರು. ಕಡೆಗೆ ಕೈಸೋತಾಗ ನಿಡಿದಾದ ಉಸಿರೊಂದು ಕರೆದು "ಅಯ್ಯೋ! ಈ

ಅನ್ಯಾಯವು ಎಂದು ಮೂರಾದೀತು?" ಎನ್ನುವರು. ಈಸಿ ಈಸಿ ಕೈಸೋತು ನಿಂತಾಗ ಮತ್ತೊಂದು ಉಸಿರನ್ನು ಕರೆದು "ಇಂಥ ಕೋಮಲ ಬಾಲಿಕೆಯರ ಮೇಲೆ ಎಂಥ ಅನ್ಯಾಯ!" ಎನ್ನುವರು. ಮತ್ತೆ ಸಮಾಜ ಶಾಸನದ ಚಿತ್ರವು ಕಣ್ಣಿದಿರಿಗೆ ಬಂದೊಡನೆ ಬೆಪ್ಪಾಗುವರು. ಇಂತು ಇವೆಲ್ಲಾ ನೋಡಿದರೆ ಯಾವುದೋ ಒಂದು ಒಡೆಯದ ಒಗಟನ್ನು ಒಡೆಯಲುದ್ಯುಕ್ತವಾಗಿ ರಾಯರು ಪೇಚಾಡುತ್ತಿರುವುದು ಕಂಡು ಬಂದಿತು ಹೀಗೆ ಒಗಟಿನ ಹೋರಾಟ ದಲ್ಲಿ ರಾಯರು ಮೈಮರೆತಿರುವಾಗ, ಪಾಪ! ಅವರಿಗೇನು ಗೊತ್ತು--- ಈಗತಾನೆ ತಮ್ಮ ವಿಚಾರದ ಒರೆಯಾಗುವುದಿದೆಯೆಂಬುದು? ಮಹಾ ಕಾಲನ ಒಂದುಸುರಿಗೆ ಅನಂತ ಜನ್ಮದ ನಮ್ಮ ಭಾವನೆ, ನಮ್ಮ ವಿಚಾರ, ನಮ್ಮ ಕಲ್ಪನೆಗಳೆಲ್ಲ ಹಾರಿಹೋಗುವವೆಂಬುದು? ಒಳ ಮನೆಯಲ್ಲಿ "ಟ್ಯಾಂ" ಎಂದಳುವ ಕೂಸಿನ ಸ್ವರವು ಹೊರಬಿತ್ತು. ತುಂಬಾ ಎಚ್ಚರಾದರು. "ಎಲ್ಲಿಯ ಸ್ವರ?" ಎಂದರು "ಕೂಸಿನದಲ್ಲವೆ?" ಎಂದು ಬಗೆದರು. "ನಮ್ಮ ಮನೆಯಲ್ಲಿ ಕೂಸೆ?" ಎಂದು ಹುಬ್ಬುಗಂಟಿಕ್ಕಿ ವಿಚಾರಿಸಿದರು. ಕಿವಿಗೊಟ್ಟು ಮತ್ತೊಮ್ಮೆ ಕೇಳಿದರು. ಮತ್ತೊಮ್ಮೆ "ಟ್ಯಾಂ" ಎಂದು ಅತ್ತಿತು ಕೂಸು. ಆಗಂತೂ ತುಂಬಾ ಗೊಂದಲಲ್ಲಿ ಬಿದ್ದರು. "ನಮ್ಮ ಮನೆಯಲ್ಲಿ, ನಮ್ಮ ಮನೆಯ ಕೋಣೆಯಲ್ಲಿ ಹಸುಗೂಸಿನ ಸ್ವರವೆ?" ಎಂದವರೆ ನೇರವಾಗಿ ಕೋಣೆಗೆ ಹೋದರು. ಕೋಣೆಯ ಕದ ಇಕ್ಕಿದ್ದು ಅವರ ಗೊಂದಲಕ್ಕೆ ಮತ್ತಷ್ಟು ಕಾರಣವಾಯಿತು. ಒಳಗೆ ಯಾರೋ ಪಿಸುಗುಟ್ಟುತ್ತಿದ್ದರೂ "ಒಳಗೆ ಯಾರು?" ಎಂದು ಕೇಳಿದ್ದಕೆ ಉತ್ತರ ಬರಲಿಲ್ಲವಾದ್ದರಿಂದ ಅವರ ಗೊಂದಲಕ್ಕೆ ಉಗ್ರ ವಾದ ಸಿಟ್ಟು ಬಂದು ಬೆಂಕಿಯಾಯಿತು. ಆಗ ತಮ್ಮ ಸರ್ವ ಶಕ್ತಿಯನ್ನು ಉಪಯೋಗಿಸಿ ಬಾಗಿಲವನ್ನು ಒತ್ತಿದರು. ಥಡಕ್ಕೆಂದು ಬಾಗಿಲ ಫಡಕುಗಳೆರಡೂ ತೆರೆದವು. ಆಗ ರಾಯರಿಗೆ ಕಾಲನು ಬಾಯಿತೆರೆದು ತನ್ನ ಒಡಲಲ್ಲಿಯ ಭಯಂಕರವಾದ ದೃಶ್ಯವನ್ನು ತೋರಿಸಿದ್ದಾನೆಂದೆನಿಸಿತು. ಅಲ್ಲಿ ಪ್ರಾಯದ ಒಬ್ಬ ಹೆಣ್ಣು ಮಗಳು

ನಿಶ್ಚೇಷ್ಟಿತಳಾಗಿ ಬಿದ್ದಿದ್ದಾಳೆ. ಆಕೆಯ ಬಟ್ಟೆ ಬರೆಗಳು ರಕ್ತದಿಂದ ತೊಯ್ದಿವೆ. ಅಲ್ಲೇ ಸಮೀಪದಲ್ಲಿಯೇ ಈ ಇಹಲೋಕದ ನಣ್ಣದಾದ ತನ್ನ ಯಾತ್ರೆಯನ್ನು ಮುಗಿಸಿಹೋದ ಕೂಸಿನ ಶವವೊಂದು, ದೈವವು ಮೂಸಿ ಒಗೆದ ಮಲ್ಲಿಗೆಯಂತೆ ಬಿದ್ದುಕೊಂಡಿದೆ. ಅಲ್ಲದೆ ಅಲ್ಲಿರುವ ಹೊಲಸನ್ನು ಬಳೆಯುತ್ತ ಒಬ್ಬ ಮುದುಕೆಯು ಕೆಳಗೆ ಮೋರೆ ಮಾಡಿ ಕುಳಿತಿದ್ದಾಳೆ ತಪ್ಪಿಗರ ಮೋರೆಗಾಗಿಯೋ ಏನೊ ಕಾಡಿಗೆಯನ್ನು ಕಾರಿ ಆ ಎಲ್ಲ ದೃಷ್ಯವನ್ನು ತೋರಿಸುವ ದೀವಿಗೆ ಯೊಂದು ನಣ್ಣಾಗಿ ಉರಿಯುತ್ತಿದೆ. ಇದನ್ನೆಲ್ಲ ನೋಡಿ ರಾಯರ ಕಣ್ಣಿಗೆ ಚಕ್ರಬಂದಿತು. ತಲೆಗೆ ಕೈಯಿಟ್ಟುಕೊಂಡರು. ಬಾಗಿಲ ತೋಳನ್ನು ಹಿಡಿದರು. ಸ್ಥೈರಿಸಲಿಲ್ಲ. ಶಕ್ತಿ ಸಾಲಲಿಲ್ಲ. ತಮ್ಮ ದುರ್ದೈವವನ್ನು ಬಲವಾಗಿ ಹಳಿಯುತ್ತ ಧಪ್ಪನೆ ಬಿದ್ದುಕೊಂಡರು.

ನೆಲಕ್ಕೆ ಬಿದ್ದ ರಾಯರು ನಾವಕಾಶವಾಗಿ ಎದ್ದು ಮತ್ತೆ ಆ ದೃಶ್ಯವನ್ನು ನೋಡಿದರು ಸಿಟ್ಟು ಸ್ಥೈರಿನದಾಯಿತು. ಆಗ ಅವಳ ಮುನ್ನಿನ ಸುಧಾರಣೆಯ ಕಲ್ಪನೆಗಳೆಲ್ಲ ಎಲ್ಲಿ ಅಡಗಿದವೊ ! ಮಗಳಿಗೆ ಪುನರ್ವಿವಾಹ ಮಾಡಬೇಕೆಂಬ ಅವರ ಕಲ್ಪನೆಗಳೆಲ್ಲ ಎಲ್ಲಿ ಅಡಗಿ ದವೊ! ಮಗಳಿಗೆ ಪುನರ್ವಿವಾಹ ಮಾಡಬೇಕೆಂಬ ಅವರ ಕಲ್ಪನೆ— "ಮರಮರನೆ ಮರುಗುವ ಬಾಲವಿಧವೆಯರು ಕಾಲು ಜಾರಿ ಕೆಟ್ಟಹಾದಿಗೆ ಬಿದ್ದರೆ ಯಾರತಪ್ಪು?" ಎನ್ನುವ ಅವರ ಉದಾರ ಭಾವನೆ ಇವೆಲ್ಲಾ ಯಾವ ಮಹಾ-ಸಾಗರದ ಅತಳದಲ್ಲಿ ಈಗ ಅಡಗಿದವೊ ಯಾರಿಗೆ ಗೊತ್ತು!! ಕಣ್ಣು ಕೆಂಪಗೆ ಮಾಡಿ ರೌದ್ರಾವ ತಾರವನ್ನು ತಾಳಿದ ರಾಯರು "ಏನೆ ಇದೆಲ್ಲಾ ಆಟ?" ಎಂದು ಹೆಂಡತಿಗೆ ಗೋಣು ಅಲುಗಿಸಿ ಕೇಳಿದಾಗ ಅವಳ ಅರ್ಧ ಜೀವವೇ ಹಾರಿತು. ಏನು ಮಾಡಬೇಕೋ ತಿಳಿಯದಾಗಿ ಅವಳ ನಾಲಿಗೆ ತತ್ತರಿಸತೊಡಗಿತು. ನಡುಗಹತ್ತಿದಳು. ಕೆಳಗೆ ಮೋರೆ ಮಾಡಿ ಸುಮ್ಮನೆ ನಿಂತುಬಿಟ್ಟಳು. "ಏನೇ ಇದು?" ಎಂದು ಮತ್ತೆ

ಗದರಿಸಿದಾಗ ಇದ್ದ ಸಂಗತಿಯನ್ನೆಲ್ಲಾ ಹೇಳದೆ ಉಳಿಯುವ ಗತ್ಯಂತರವೇ ಇರಲಿಲ್ಲ. ಹೇಳಿದಳು. ಹೇಳಿ ಮಗಳ ತಪ್ಪಿಗಾಗಿ ಕಾಲು ಹಿಡಿದು ಅಳತೊಡಗಿದಳು. "ಹೇಗಾದರೂ ಮಾಡಿ ಅವಳ ಮಾನವನ್ನು ಕಾಯಿರಿ" ಎಂದು ಬೇಡಿಕೊಂಡಳು. ಆಗ ಅವರ ಸಿಟ್ಟು ಮತ್ತಷ್ಟು ವಿಕೋಪಕ್ಕೆ ಏರಿತು. "ಪಾಪಿಣಿ! ಇದೆಲ್ಲಾ ಆಟ ನಿನ್ನದೇ ಇರಬೇಕು. ಇಷ್ಟು ದಿನ ನನಗೇಕೆ ಹೇಳಲಿಲ್ಲ?" ಎಂದು ಗುಡುಗು ಹಾಕಿದರು. "ಪಿಶಾಚಿ! ನಿನಗೆ ನಂಬಿದ್ದೆನಲ್ಲಾ!! ನನ್ನ ಹೊಟ್ಟೆಯಲ್ಲಿ ಹುಟ್ಟಿ ನನ್ನ ಮೋರೆಗೆ ಮಸಿ ಬಳಿದೆಯಲ್ಲಾ! ನಿನ್ನನ್ನೀಗಲೆ ಯಮಪುರಿಗೆ ಕಳಿಸುವೆನು. ನೀನೀ ಮನೆಯಲ್ಲಿರಲು ಯೋಗ್ಯಳಲ್ಲ" ಎಂದು ಅಲ್ಲೇ ತೂಗಹಾಕಿರುವ ಕತ್ತಿಯನ್ನು ಹಿರಿಯ ಹೋಗುವರು. ಆದನ್ನು ಹೆಂಡತಿ ತಡೆಯುವಳು. ಅಷ್ಟರಲ್ಲಿಯೇ ಸುಗುಣನು ಮನೆಯ ಹೊಸ್ತಲಲ್ಲಿ ಕಾಲಿಕ್ಕುವನು. "ಬಾ ದುಷ್ಟಾ! ಬಾ!! ಈ ಏಟಿಗೆ ನೀನು ತುತ್ತಾಗು ಬಾ!!! ಪಾಪಿ! ನಿನ್ನನ್ನು ಸಾಕಿ ಸಲಹಿದ್ದಕ್ಕೆ ರಿಣ ತೀರಿಸಿದಿಯಾ?" ಎನ್ನುತ್ತ ರಾಮಣ್ಣನವರು ಆತನ ಕಡೆಗೆ ಧಾವಿಸಿಹೋಗುವರು. ಆಗ ಅವರ ಹೆಂಡತಿ ತಡೆದು ಪರಿಪರಿಯಾಗಿ ಬೇಡಿಕೊಳ್ಳುವಳು. "ಹೀಗೆ ನೀವು ಗದ್ದಲಮಾಡಿದರೆ ನಮ್ಮ ಮಾನಕ್ಕೆ ಹಾನಿ. ಶಾಂತರಾಗಿರಿ." ಎಂದು ಅವರನ್ನು ಶಾಂತಮಾಡಿದಳು. ರಾಯರು, ಒಂದೂ ತಿಳಿಯದವರಾಗಿ ಮೊಣಕಾಲಲ್ಲಿ ಮೋರೆ ಸೇರಿಸಿಕೊಂಡು ಒಂದು ಮೂಲೆ ಹಿಡಿದು ಕುಳಿತುಬಿಟ್ಟರು.

ಈಗ ಕುಸುಮಕ್ಕನ ತಾಯಿ ಆ ಮೃತ ಶಿಶುವನ್ನು ಒಂದು ಬುಟ್ಟಿಯಲ್ಲಿಟ್ಟು "ಎಲೆ ಸುಗಣ್ಣಾ!" ಎಂದು ಒದರಿದಳು. ಪಾತಾಳದಲ್ಲಿ ಅರಜೀವಿಯಾಗಿ ಬಿದ್ದ ಸುಗುಣನು ಮೋರೆಯನ್ನು ಒಲ್ಲಿಯಲ್ಲಿ ಮುಚ್ಚಿಕೊಂಡು ಕಣ್ಣೀರಿಡುತ್ತಾ ಅವಳ ಕಡೆಗೆ ಬರುವನು. ಆಗ ಅವಳು:—

"ಇಗೋ ನಿಮ್ಮಿಬ್ಬರ ಪಾಪದ ಫಲ! ಇದನ್ನು ತೆಗೆದು ಕೊಂಡು ನೀನು ಬೇಕಾದಲ್ಲಿ ಹೋಗು. ಇನ್ನು ನಿನ್ನ ಮೋರೆ ನಮ್ಮ ಕಣ್ಣಿಗೆ ಹಾಕಬೇಡ, ಹೋಗು." ಎಂದು ಹೇಳಿ ಒಳಗೆ ಹೋಗಿಬಿಟ್ಟಳು.

ಸುಗುಣನು ಕಣ್ಣೀರು ಸುರಿಸುತ್ತ "ಇಂದಿಗೀ ಮನೆ ನನಗೆರ ವಾಯಿತೆ!" ಎಂದು ದುಃಖದಿಂದ ಬುಟ್ಟಿಯನ್ನು ತಲೆಯಮೇಲೆ ತೆಗೆದುಕೊಂಡು "ನಮ್ಮ ಪಾಪದ ಫಲವೇ? ಕೇವಲ ನಮ್ಮ ಪಾಪದ ಫಲವೆ?? ಅವಳ ದುರ್ದೈವ, ನನ್ನ ಪರದೇಶಿ ತನ, ಲೋಕದ ಕುರುಡು ನಂಬಿಕೆ ಇವೆಲ್ಲವುಗಳ ದಾಳಿಯ ಫಲವಿದು!" ಎಂದೆಣಿಸುತ್ತ ಮನೆಯ ಬಿಟ್ಟು ಹೊರಗಾದನು.

ಆ ಕಪ್ಪಾದ ರಾತ್ರಿಯಲ್ಲಿ ಬುಟ್ಟಿಯನ್ನು ಹೊತ್ತು ಸುಗುಣನು ಸಾವಕಾಶವಾಗಿ ಹೊರಟಿದ್ದಾನೆ. ಹೊರಗೆ ಮುಸುಕಿದ ಕಪ್ಪು ಆತನ ಅಂತರಂಗವನ್ನೂ ಮುಸುಕದೆ ಬಿಟ್ಟಿರಲಿಲ್ಲ. ಎಲ್ಲೆಡೆಯಲ್ಲಿಯೂ ಮುಸಕಿದ ಆ ಕರಾಳವಾದ ತಪ್ಪಿನಲ್ಲಿ ಸ್ಮೃತಿತಪ್ಪಿ ಎಲ್ಲೋ ಆ ಬುಟ್ಟಿ ಯನ್ನೆಸೆದು ಯಾವ ಕಡೆಗೋ ಹೋಗಿಬಿಟ್ಟನು.

ಜುಮು ಜುಮು ಬೆಳಗಾಗುತ್ತಲಿದೆ. ಊರ ಜನರು ತಂಬಿಗೆ ಯನ್ನು ತೆಗೆದುಕೊಂಡು ಬೈಲಿಗೆ ಹೋಗುತ್ತಲಿದ್ದಾರೆ. ಅಗಸಿಯ ಮುಂದೆ ಯಾವನೋ ಒಬ್ಬನು ಒಮ್ಮೆಲೆ ಬೆಚ್ಚಿ "ಏನಿದು?" ಎಂದನು ಅಷ್ಟರಲ್ಲಿ ಹತ್ತಾರು ಜನರು ಕೂಡಿದರು. ನೋಡುವುದರಲ್ಲಿ ಒಂದು ಕೂಸು!

ಆ ಕೂಸನ್ನು ಸುಗುಣನು ಕಳ್ಳಿಯ ಬೇಲಿಯಮೇಲೆ ಒಗೆದದ್ದ ರಿಂದ ಅದರ ಘಾಡಿಗೆ ಬಡೆದು ಪುಟಿದು ಹಾದಿಗೆ ಬಿದ್ದಿತ್ತು. ಒಂದು ನಾಯಿಯು ಅದನ್ನು ಎಳೆತಂದು ಇಲ್ಲಿ ಬಿಟ್ಟಿತು. ಅದನ್ನು ನೋಡಿ ಒಬ್ಬನು "ಅಯ್ಯೋ! ಯಾರ ತಪ್ಪಿನ ಫಲವಿದು?" ಎಂದನು.

ಮತ್ತೊಬ್ಬನೂ ಹಾಗೇ ಅಂದನು. ಮಗದೊಬ್ಬನೂ ಅದೇ ಶೀಡಿದನು. ಒಟ್ಟಿನ ಮೇಲೆ ಹೋಗಿ ಬರುವವರೆಲ್ಲರೂ ಅದನ್ನೇ ಉಚ್ಚರಿಸತೊಡಗಿದರು. ಕಡೆಗೆ ಬೈಲಿಗೆ ಹೊರಟ ರಾಯರು ಅದನ್ನೇ ಉಚ್ಚರಿಸಿ ಮುಂದೆ ಹೊರಟರು. ಹಾ ಹಾ ಅನ್ನುವದರಲ್ಲಿಯೇ "ಯಾರ ತಪ್ಪಿನ ಫಲ?" ಎನ್ನುವ ಶಬ್ದ ಎಲ್ಲೆಡೆಯಲ್ಲಿಯೂ ಹಬ್ಬಿ, ಆಕಾಶವನ್ನು ವ್ಯಾಪಿಸಿತು.

ಆದರೆ ಅದು ನಿಜವಾಗಿ ಯಾರ ತಪ್ಪಿನ ಫಲ?

?

# ಭವ್ಯ ಸ್ವಪ್ನ

"ತಾಯಿ! ನೀ ನುಡಿದ ನುಡಿ ಸತ್ಯವೇನೇ ಅಮ್ಮಾ? ಎಲ್ಲೆಲ್ಲಿಯೂ ದೇವನಿಹನೆಂದು ಹೇಳಿದ ನಿನ್ನ ಮಾತು ನಿಜವೆ?........ ಹೇಳು ತಾಯಿ! ಹೇಳು. ವಿಶ್ವವಾಣಿಯಾಗಿ ನೀನಿರುವಲ್ಲಿಂದಲೇ ನನ್ನ ಕಿವಿಯಲ್ಲಿ ಇನ್ನೊಮ್ಮೆ ಕೂಗಿ ಹೇಳು............ಆ ದೇವರು ಎಲ್ಲಿರುವನಮ್ಮಾ? ಎಂದು ನಾನು ಕೇಳಿದಾಗ 'ದೇವರಿಲ್ಲದ ತಾಣವಾವುದು?' ಎಂದು ಧ್ರುವನ ತಾಯಿ ಹೇಳಿದಳು ಮಗು! ಎಂದು ಹೇಳಿದ ದಿನವೆ ಆತನನು ಕಾಣುವ ಆಶೆ ಹುಟ್ಟಿದೆಯಮ್ಮಾ! ಆತನನು ಕಂಡು ಬೇಡಿಕೊಳ್ಳುವೆನಮ್ಮಾ!! ಬೇಡಿಕೊಳ್ಳುವೆ. ಬೇಡಿಕೊಂಡು ಬಯಕೆಗಳನ್ನೆಲ್ಲವನ್ನೂ ಈಡೇರಿಸಿಕೊಳ್ಳುವೆನು. ಹೇಳು ತಾಯಿ! ಇನ್ನೊಮ್ಮೆ ಹೇಳು!!........ತಾಯಿ! ಆ ದೇವನನು ಹೇಗೆ ಕಂಡೇನಮ್ಮಾ?........ಬಿಡು ಬಿಡು ನೀನು ಹೇಳದಿರೆ ಬಿಡು. ಮೂಲೋಕವಾದರೂ ಸುತ್ತಿ ಆತನೆಲ್ಲಿರುವನೆಂಬುದು ಗೊತ್ತುಹಚ್ಚುವೆ. ಗೊತ್ತುಹಚ್ಚಿ ಆತನಲ್ಲಿ ಶರಣುಹೋಗುವೆ.........ತಾಯಿ! ನೀನು ಕುರುಡೆ. ನಿನ್ನನುಳಿದು ನಾನು ಹೇಗೆ ತೆರಳಲೆ? ನಾನು ತೆರಳಿದರೆ ನಿನ್ನಂತರಂಗದ ಪ್ರಾಣದುಸಿರು ಹಾರಿಹೋಗಲಿಕ್ಕಿಲ್ಲವೆ? ಆಗ ನಿನಗೆಷ್ಟು ದುಃಖವಾದೀತು!! ನಿನ್ನ ದುಃಖದಂಬುಧಿಯಲ್ಲಿ ಸುಖದ ಕೈರವವಾಗಿ ಬೆಳೆದಿರುವೆನಲ್ಲಾ! ಅದನ್ನು ನೋಡುತ್ತ ನೋಡುತ್ತ ನಿನ್ನ ಜೀವನದ ಇರುಳುಗಳಿಗೆಗಳನ್ನೆಲ್ಲಾ ಒಂದೊಂದಾಗಿ ಕಳೆಯುತ್ತಿರುವಿಯಲ್ಲಾ!! ಇನ್ನು ಮುಂದೆ ಹೇಗೆ ಕಳೆಯುವಿ ತಾಯಿ?

ಒಮ್ಮೊಮ್ಮೆ ನಿನ್ನಂತರಂಗಕ್ಕೆ ನೋವಾದಾಗ ನಾನು ನಿನ್ನಡಿಯಲ್ಲಿ ಬಂದು ನನ್ನೆರಡೂ ಕೈಗಳಿಂದ ನಿನ್ನ ಕೊರಳನಪ್ಪುತ್ತ ಮುಖದೆಡೆ ಮುಖಮಾಡಿ ಲಕಲಕನೆ ಹೊಳೆಯುವ ರಸಗಣ್ಣುಗಳನ್ನು ತಿರುಗಿಸಿ ಜೋಲುಬಿದ್ದಾಗ ನಿನ್ನ ಕಣ್ಣೀರಿನಲ್ಲಿ ತೊಯ್ದ ಸೋತ ಕಣ್ಣುಗಳನ್ನು ನನ್ನೆಡೆಗೆ ತಿರುಗಿಸುತ್ತಿದ್ದಿಯಲ್ಲಾ ! ಆಗ ನಿನ್ನ ದುಃಖವೆಲ್ಲಾ ಎಲ್ಲಿಯೋ ಮಾಯವಾಗುತ್ತಿದ್ದಿಯಲ್ಲ !! ತಾಯಿ ! ಆ ದುಃಖ ನೀಗಿಸುವವರಾರಿನ್ನು?........ಅಮ್ಮಾ ! ನಿನ್ನ ಅಗಣಿತವಾದ ಸಂಕಟಗಳು ನಿನ್ನಂತರಂಗದಲ್ಲಿ ಕೋಲಾಹಳಗೆಯ್ಯುತ್ತಿರಲು ನಾನು ನಿನ್ನ ಮಗ್ಗುಲಲಿ ಮಲಗಿ, ನಾಡಕತೆಗಳನ್ನೆಲ್ಲಾ ಹೇಳಿ ನಕ್ಕು ನಗಿಸಿ ಅದೆಲ್ಲವನ್ನು ಶಾಂತಗೊಳಿಸುತ್ತಿರಲಿಲ್ಲವೆ? ಆ ಕೆಲಸವನ್ನಿನ್ನಾರು ಮಾಡಬೇಕು ತಾಯಿ ?? ನಿನ್ನ ಹೊಟ್ಟೆಯಲ್ಲಿ ಹುಟ್ಟಿ, ನಿನ್ನ ಮೊಲೆಯುಂಡು ಬಗಲಲ್ಲಿ ಬೆಳೆದು ದೊಡ್ಡವನಾದ ನಾನು ನಿನ್ನನ್ನು ಆಪತ್ತಿಗೀಡು ಮಾಡಿ ಹೇಗೆ ಹೋಗಲೆಮ್ಮಾ ! ಎಂಥ ಸಂಕಟವು ಎಂಥ ದುಃಖ ನಿನ್ನದು !!............ದುಃಖ ?........ತಾಯಿಯ ದುಃಖ !! ಆ ದುಃಖಗಳನ್ನು ಪರಿಹರಿಸಿಕೊಳ್ಳುವುದಕ್ಕಾಗಿಯೇ ಹೊರಟಿರುವೆನಲ್ಲವೆ ? ಅಂದರೆ ಮತ್ತೇತಕೆ ಮನ ಹಿಂದೆಗೆಯ ಬೇಕು ?? ಬೇಡ ಮನವೆ ಹಿಂದೆಗೆಯಬೇಡ. ಆಗಲಿ ದುಃಖವಾಗಲಿ. ಇನ್ನೂ ಸಹಸ್ರಪಟ್ಟು ದುಃಖವಾದರೂ ಚಿಂತೆಯಿಲ್ಲ ಆ ದೇವನನ್ನು ಕಂಡು ಒಂದು ಕ್ಷಣದಲ್ಲಿ ಅವೆಲ್ಲವನು ಧ್ವಂಸಮಾಡಿಕೊಳ್ಳುವೆ.'' ಎಂದೆನ್ನುತ್ತ ಅವನತ ಶಿರನಾದ ಒಬ್ಬ ಕಿಶೋರನು ನಿಂತುಕೊಂಡಿದ್ದಾನೆ. ಆತಗಿನ್ನೂ ಹದಿನಾರು ವರುಷ ಮಿಕ್ಕಿರಲಿಲ್ಲ. ಇರುಳಕನ್ನೆಯ ಮೈಕಪ್ಪಿನಲ್ಲಿ ಮರೆಯಾದ ಆತನ ಮೈಸಿರಿಯನ್ನು ಆತನ ಬಾಯಿಯಿಂದ ಹೊರಡಲುಲಿಯುವ ಮಾತುಗಳು ಮೃದು ರೇಖೆಗಳನ್ನೆಳೆದೆಳೆದು ಮನದಾಗಸದಲ್ಲಿ ಅಚ್ಚಳಿಯದ ಚಿತ್ರವೊಂದನ್ನಂಕಿಸುತ್ತಿಹುದು. ಮತ್ತೆ ಮತ್ತೆ ಮಾತನಾಡಿ ಕಣ್ಣೀರ ಸೆಲೆಯಲ್ಲಿ ಅವನ್ನು ಹರಿಯಿಸುವನು. ಮುಂದಿನದು ಅರಿಯದಾಗಲು ಮಂಕು ಬಡೆದವನಂತೆ ಗದ್ದದಲ್ಲಿ ಕೈಯನ್ನಾನಿಸಿ ಅಲುಗುದುಟಿಗಳ ಮೇಲೆ ಬೆರಳನಿಟ್ಟು ನಿಂತುಕೊಳ್ಳುವನು.

"ತಾಯಿಯನು ಬಿಟ್ಟು ಹೇಗೆ ಹೋಗಲಿ ? " ಎಂದು ಮನೆಯ ಕಡೆ ಹೊರಳುವನೊಮ್ಮೆ, "ಲೆಕ್ಕಿಸೆನು, ತಾಯಿಯನು ಲೆಕ್ಕಿಸೆನು" ಎಂದೆನ್ನುತ್ತ ಬಿರುಸುಮುನ ಮತ್ತೊಮ್ಮೆ ಮಾಡಿಕೊಳ್ಳುವನು. ಅಷ್ಟರಲಿ ಮೂಡಣದ ದಿಬ್ಬಿನೊಳು ಕೆಂದುಟಿಯ ಉಷೆಬಂದು ನಕ್ಕು ನಲಿದಳೋ ಏನೊ, ಅವಳ ಅಧರ ಕಾಂತಿಯಲ್ಲಿ ಜಗವು ತನ್ನ ವೈಸಿರಿಯನ್ನು ತೋರಿಸ ತೊಡಗಿತು. ಆಗ ಆ ಕಿಶೋರನು ತನ್ನ ಕಿರಿಹೆಜ್ಜೆಗಳನ್ನೊಂದೊಂದಾಗಿಡುತ್ತ ಮೆಲುಮೆಲನೆ ನ ಡೆ ದಿ ಹ ನು. ಒಂದೊಂದಿಗೆ ಒಂದೊಂದು ಕರುಳು ಕತ್ತರಿಸಿದ ವೇದನೆಯು ಆತನ ಮುಖದಲ್ಲಿ ಮುಳ್ಳು ಮೊನೆಯಾಗಿ ತೋರುವುದು. ಒಮ್ಮೆಲೆ ಥಿಂತು ತನ್ನಿದಿರು ನೆಲದಮೇಲೆ ನೋಡುತ್ತಾನೆ. ಏನೋ ಬಿದ್ದುಕೊಂಡಿದೆ. " ಏನಿರಬೇಕು ? " ಎಂದು ತೀರ ಸನಿಹಕ್ಕೆ ಹೋಗಿ ದಿಟ್ಟಿಯಿಟ್ಟು ನೋಡಿದನು. ಪರಕಿಸಿದನು. "ಎಲಬು!........ತಲೆ ಎಲಬು!!........ ಬುರುಡೆ !!! " ಎಂದು ಹೆದರಿದವನಂತೆ ಸ್ವಲ್ಪ ಹಿಂದೆ ಸರಿಯುವನು. "ಎಲಬು ? ತಲೆಡೋಗಿ ?? ಯಾರ ತಲೆಡೋಗಿ ??? " ಎಂದು ಸನಿಹಕ್ಕೆ ಹೋಗುವನು. ಏನನೋ ಬಗೆಯುವನು. ತಲೆಗೆ ಕೈಯಿಟ್ಟು ಹೆಗಲಿಗೆ ಗೋಣ ಚಲ್ಲುವನು. ಕಣ್ಣು ಮುಚ್ಚಿ ಮನತುಂಬಿ ಥೇನಿಪನು. ತುಂಬಿದುಸುರನು ಎಳೆದು ಅಗಲವಾಗಿ ಕಣ್ಣನರಳಿಸುವನು. "ಡೋಗಿ! ತಲೆಯಡೋಗಿ!! ಅಯ್ಯೋ ಈ ಪಾಡು ಬಂದಿತೆ. ಇದಕೆ!! ........ಇದಕೆ ಜೀವವಿರುವಾಗ ಇದನು ಹೊತ್ತ ಮಾನವನು ಎಷ್ಟು ದಕ್ಷತೆಯಿಂದ ಕಾಯ್ದಿರಬೇಕು. ಇದು ನನ್ನದು, ಇದು ನನ್ನದು ಎಂದು ಹೇಳಿಕೊಂಡು ಕಡೆಗೆ ಈ ಗತಿಗೀಡು ಮಾಡಿದನೆ ಆತನು?.... ಯಾರಾದರೊಬ್ಬ ಸುಕೋಮಲೆಯ ಶಿರವಾಗಿರಬೇಕೆ ಇದು ? ಅಥವಾ ಸುಕೋಮಲೆಯರನು ಭೋಗಿಸುವ ಭೋಗಾಭಿಲಾಷೆಯ ಪುರುಷ ಸಿಂಹನ ಶಿರವಾಗಿರಬೇಕೆ ?? ಯಾರ ಶಿರವಾಗಿರಬೇಕು ??........... ಎಲೆ ಬುರುಡಿಯೇ, ನಿನ್ನ ಕಾಲದಲ್ಲಿ ನೀನು ಯಾರ ಶಿರವಾಗಿ ಶೋಭಿಸಿದಿ ಹೇಳು ? ಪುರುಷ ಶಿರವಾಗಿದ್ದಿಯಾ ??...........ಏನು ಸುಮಂಗಲೆಯ ಶಿರವಾಗಿದ್ದರೆ ನಿನ್ನ ಕಪ್ಪಾದ ಕುರುಳುಗಳನೆಲ್ಲಿ ಕಳೆದು

ಕೊಂಡಿ? ತಾರುಣ್ಯದುಬ್ಬಿನಲಿ ಮೆರೆವ ಯುವಕಜನ ಮನವನ್ನು ಬಿಗಿಯಾಗಿ ಬಂಧಿಸುವಂಥ ನಿನ್ನ ಸಳಿಸಳ ಕೂದಲಗಳನ್ನೆಲ್ಲಿ ಬಚ್ಚಿಟ್ಟಿರುವಿ? ನಿನ್ನ ಪುರುಷನು ಮೆಚ್ಚುವ ನಯವಾದ ಬಂಧನದ ಹಿಡಿದುರುಬು ಯಾರ ವಶದಲ್ಲಿಕ್ಕಿರುವಿ? ನಿನ್ನ ಮಾಂಗಲ್ಯದ ಹಿರಿಕುರುಹು ಧರಿಸುವಂಥ ಹೊನ್ನ ಬಣ್ಣದ ನೊಸಲನೆಲ್ಲಿ ಕಳೆದುಕೊಂಡಿರುವಿ? ಎಲೆಡೋಗಿ! ನಿನ್ನೆದೆಯರಸನೊಡನೆ ನೀನು ಮುನಿದುಕೊಂಡಾಗ ಆತನು ನಿನ್ನ ರಮಿಸಲು ಹಿಡಿದು ಮುದ್ದಾಡುವಂಥ ಇಣಿಕಿ ಇಕ್ಕುವ ತಿಳಿಗುಲಾಬಿಯನು ಹೊತ್ತ ನಿನ್ನ ಕನ್ನಡಿಗಲ್ಲಗಳನ್ನು ಎಲ್ಲಿಬಿಟ್ಟಿರುವಿ? ನಯವಾಗಿ ಶೋಭಿಸುವ ನಿನ್ನ ಎರಳೆನೋಟಗಳ ಸ್ಥಳದಲ್ಲಿ ಕೆಚ್ಚೆದೆಯ ಪುರುಷನನು ಹೆದರಿಸುವ ಈ ಭೀಕರದ ಹೊದರುಗಳೆಲ್ಲಿಂದ ಬಂದವು? ನಿನ್ನ ಪುರುಷನು ಸೇವಿಸುವ—ಎಂದಿಗೂ ಸರಿಯದ ಜೇನುಗೊನೆಯಾಗಿರುವ ಅಧರ ದ್ವಯಗಳ ಸ್ಥಳದಲ್ಲಿ ಹೃದಯ ವಿದಾರಿಸುವ ಭೀಕರತೆ ಎಲ್ಲಿಯದು?....... ಎಲೆ ಡೋಗಿ! ನೀನು ಪುರುಷ ಶಿರವಾಗಿದ್ದರೆ ನಗೆಯ ಚಲ್ವಿತೆಯ ಮೋಹನ ಕಾಂತೆಯರನು ಮೋಹಗೊಳಿಸುವ ನಿನ್ನ ಮುದ್ದುಮುಖ ಎಲ್ಲಿಹೋಯಿತು? ಆ ನಿನ್ನ ಮುಖದಲ್ಲಿ ಹೊಳೆಯುವ ಕೆಚ್ಚೆದೆಯ ವೀರತೆ ಎಲ್ಲಿ ಮಾಯವಾಯಿತು? ಅದರಲ್ಲಿ ಆಡುವ ಕುಡಿಮೀಸೆಗಳು ಎಲ್ಲಿ ಮಣ್ಣುಗೂಡಿದವು? ಕೊಬ್ಬಿದ ಕೋರುಜವ್ವನೆಯರನ್ನು ಮರುಳುಗೊಳಿಸುವ ಆ ಕುಡಿಮಿಂಚಿನ ಕಡೆಗಣ್ಣುಗಳನ್ನು ಎಲ್ಲಿ ಹಾರಿಸಿಬಿಟ್ಟೆ? ನಿನ್ನ ಸುದತಿಯರ ಸುಕೋಮಲವಾದ ಹವಳದುಟಿಗಳನ್ನು ಹೀರುವ, ಕರ್ಪೂರ ವೀಳೆಯ ಮೆಲೆದ ಕೆಂಪಾದ ಮುಖವನ್ನೆಲ್ಲಿಟ್ಟಿರುವಿ? ಅದರಲ್ಲಿರುವ ದಾಳಿಂಬವನು ಹೋಲುವ ಕೆಂಬಲ್ಲಗಳೆಲ್ಲಿಹವು? ಆ ಎಲ್ಲ ಸಿರಿ ಸೊಬಗಗಳು ಎಲ್ಲಿ ಹಾಳಾದವು?........ಎಲೆ ಡೋಗಿ! ಯಾವ ಸುಕೃತದಿ ನೀನು ರೊಜ್ಜಿನಲಿ ಹೂವಾಗಿ ಸೌರಭವ ಸೂಸುತ ಸಂತಸವ ಬೀರಿದಿ? ಎಲ್ಲಿಯ ದುಷ್ಕೃತ ಬಂದು ಮಣ್ಣು ಮುಕ್ಕಿಸುವ ಈ ಪಾಡಿಗಿಳಿಸಿತು?....... ಎಲೆಲೆ! ಆಬ್ಜ ವ್ಯೆಲುಗಳಾಜೆಯಲಿ ಚಿಕ್ಕೆಗಳೆಲ್ಲ ಚೆಂಡಿನಂತೆ ಹಾರುತಿಹವೆಂಬ ಗುಟ್ಟನು ಅರಿತುಕೊಂಡ

ನಿನ್ನೊಳಗಿದ್ದ ಆ ಮಿದುಳನು ಮುಗಿಲೆಲ್ಲ ಮುತ್ತಾಗಿ ಕಾಣುವ ನಕ್ಷತ್ರಗಳನೆಲ್ಲ ಎಣಿಕೆ ಹಚ್ಚಿದ ಆ ಮಿದುಳನ್ನು ನಿನ್ನ ಗುಹೆಯುಳಿರಿಸಿಕೊಂಡಿದ್ದಿಯಲ್ಲವೆ? ಆ ನಿನ್ನ ಹೊಟ್ಟೆ ಈಗ ಮಣ್ಣು ಮುಕ್ಕುತ್ತಿದೆಯಲ್ಲಾ ! ಮುಂದೆ ಈ ಗತಿ ಬಂದೀತೆಂದು ಆಗಳೆ ಆ ಮಿದುಳು ಏಕೆ ಕಲ್ಪಿಸಲಿಲ್ಲ? ಅಯ್ಯೋ ನಿನ್ನದು ಏನು ಗತಿ ಡೋಗಿ!........" ಎಂದನ್ನುತ್ತ ಉಸುರುಗರೆಯುವನು. ಸ್ವಲ್ಪ ತಡೆದು ಎದ್ದುನಿಲ್ಲುವನು. ಮತ್ತೆ ಕೂತುಕೊಳ್ಳುವನು. ಕೂತುಕೊಂಡು ಮತ್ತೆ ಏನನೋ ಅಂದುಕೊಳ್ಳುವನು. "ಈ ಬುರುಡೆಯಂತೆಯೇ ಅಲ್ಲವೆ ನನ್ನ ಪರಿಯೂ! ಅಂದಮೇಲೆ?...........ಅಂದಮೇಲೆ ತಾಯಿಯೆಡೆಗೇಕೆ ಹಂಬಲ? ಬೇಡ! ಹಂಬಲಬೇಡ!! ಮನವೇ ದೃಢವಾಗು. ಶಿವನನ್ನು ಕಾಣುವವರೆಗೆ ಖಂಡಿತವಾಗಿಯೂ ತಾಯಿಯನ್ನು ಕಾಣೆನೆನ್ನು ....ಕಾಣೆನೆನ್ನು" ಎಂದು ಅನ್ನುತ್ತ ಮುಂದೆ ಮುಂದೆ ಹೋಗಿಯೇ ಬಿಡುವನು. ಆಗ "ಸಾವು ಇದು ಏನು ಇದೆ? ಸಾವು ಇದು ಏನು ಇದೆ??" ಎನ್ನುವ ನುಡಿಗಳು ಆತನ ಬಾಯಿಯಿಂದ ಹೊರಡುತಿದ್ದವಲ್ಲದೆ ಜೀವನ ಮರಣಗಳ ಸಮಸ್ಯೆಯನ್ನು ಬಿಡಿಸುವುದರಲ್ಲಿ ಆತನ ತಲೆಯು ತೊಡಗಿದ್ದಿತು. ಆಗ ಬೆಳಗಿನ ಬೆಳ್ಳಗಿನ ನೊರೆಹಾಲು ಎಲ್ಲೆಡೆಯಲ್ಲಿಯೂ ಸುರಿಯುತ್ತಲಿತ್ತು. ಒಡನೆಯೇ ಸುಮಂಗಲ ಗಾನವನ್ನು ಕೋಗಿಲೆಗಳು ಹಾಡತೊಡಗಿದವು. ಹಕ್ಕಿಗಳು ಸ್ವಸ್ತಿತೆಯ ಪಾಠವನ್ನು ಹೇಳತೊಡಗಿದವು.

೨

ಮತ್ತೊಂದು ದಿನ ಸಂದಿಸಿತು. ತನ್ನ ಊರು ಬಿಟ್ಟು ಕೇರಿ ಬಿಟ್ಟು ಎಲ್ಲೆಲ್ಲಿಯೋ ಅಲೆಯುತ್ತ ಅಲೆಯುತ್ತ ಆ ಕಿಶೋರನು ವನದ ಒಂದು ಮಗ್ಗುಲಲ್ಲಿ ನಿಂತುಕೊಂಡಿದ್ದಾನೆ. ನಿಂತ ಆತನ ಠೀವಿ, ಉಗ್ಗುವ ಆತನ ಮನದ ಭಾವ, ಒಸರುವ ಕಣ್ಣಕಾಂತಿ ಒಂದು ತರದಿ ಎಲ್ಲವೂ ವಿಚಿತ್ರವಾಗಿಹುದು. ಪೇಳಲೆನಗೆ ಇನಿತು ಕೂಡ

ಶಕ್ಯವಿಲ್ಲ. ಲಸಲಸಿತವಾದ ಆ ಕಿಶೋರನ ಮುಖದಲ್ಲಿ ಹುಚ್ಚು ಕೆಳೆಯು ಬೇಸರವನ್ನು ತನ್ನೊಡನೆ ಕರೆದುಕೊಂಡು ಅಲ್ಲಿ ವಿಹರಿಸು ತ್ತಿರಲು ಯಾವ ಭಾವವೆಂದು ಹೇಳಲಿಕ್ಕಾದೀತು? ಪ್ರಶಾಂತವಾದ ಆತನ ಮನದ ಕೊಳದಲ್ಲಿ ದೇವನ ಹಂಬಲದ ಬಿರುಗಾಳಿ ಬೀಸಿ ಪ್ರಳಯಕಾಲದ ತೆರೆಗಳನ್ನೆಬ್ಬಿಸುತ್ತಿರಲು ಏನೆಂದು ವರ್ಣಿಸಲಿ? ಅಲ್ಲದೆ ಘಳ್ಳೆಂದು ಎರಚುವ ಆತನ ಕಣ್ಣಕಾಂತಿಯು ನಿರಾಶೆಯ ಜ್ವಾಲೆಗೆ ನೀರಾಗಿ ಹರಿಯುತ್ತಿರಲು ಏನನು ವಿವರಿಸಲಿ? ನಿಂತವನು ನಿಂತುಕೊಂಡೇ ಇದ್ದಾನೆ. ಆಗ ಆತನ ದಿಟ್ಟಿ ನೆಲದೆಡೆ ಹರಿಯು ತ್ತಿದ್ದರೂ ಮನ ಮತ್ತೊಂದೆಡೆ ಓಡುತಲಿತ್ತು. ಮನ ದಿಟ್ಟಿ ಗಳೊಮ್ಮೊಮ್ಮೆ ಕೂಡಿದಾಗ ನಾಸಿಕದ ಮಾರ್ಗವಿಡಿದು ಬಿಸಿಯುಸಿರು ಎದೆಯ ತಿದಿಯನ್ನುಬ್ಬಿಸಿ ಹೊರಗೆ ದುಮುಕುತಲಿತ್ತು. ಆಗ ಕೆಳ ದೃಷ್ಟಿ ಮೇಲಕ್ಕೆತ್ತಿ ಸುತ್ತೆಲ್ಲ ನೋಡುವನು. ಕಣ್ಣು ರೆಪ್ಪೆಯ ಮೇಲೆ ಕೈಗಳನೆಳೆದುಕೊಳ್ಳುವನು. ಎದೆಯಲ್ಲಿ ಕೈಕಟ್ಟಿ ಹೆಗಲಿಗೆ ಗೋಣಚೆಲ್ಲುವನು. ಕಣ್ಣುಗಳನ್ನು ಮುಚ್ಚುವನು; ಒಮ್ಮೆ ಬಿಚ್ಚು ವನು; ಮತ್ತೊಮ್ಮೆ ಅರೆತೆರೆದು ನಿಲ್ಲಿಸುವನು. "ಎಲ್ಲಿ ಹಡುಕಲಿ? .......ಎಲ್ಲಿ ಹುಡುಕಲಿ??............ದೇವಾ! ನೀನೆಲ್ಲಿರುವಿ? ಎಲ್ಲೆ ಲ್ಲಿಯೂ ಹುಡುಕಿದೆನಲ್ಲಾ!!............ನನ್ನ ಕಣ್ಣು ತಪ್ಪಿಸಿ ಕಾಣದೆ ಎಲ್ಲಿ ಅಡಗಿಕೊಂಡಿರುವಿ?........ಒಂದು ಕಾಡ ಸುತ್ತಿದೆನೆ! ಒಂದು ನಾಡ ಸುತ್ತಿದೆನೆ!! ಏನೆಂದು ಹೇಳಲಿ ದೇವಾ!!! ಏನಂದು ಹೇಳಲಿ. ಸುತ್ತಿ ಸುತ್ತಿ, ದಣಿದಣಿದು, ಬಾಯಾರಿ ಬೆಂಡಾಗಿ, ಬಸವಳಿದು ಬಿಸಿಸುಯ್ದು ಈ ಎಡೆಬಂದೆ. ಇಲ್ಲಿಯೂ ನಿನ್ನಿರವ ಕಾಣದಲ್ಲ.......'ಈ ವನದ ಆಚೆಯಲಿ ಕೊಳ್ಳಗಳ ದಾಟಿ, ಬಹು ದೂರದಲ್ಲಿರುವ ಕಟ್ಬಾರಣ್ಯದಲ್ಲಿ ಒಬ್ಬ ಮುನಿ ಇಹನು. ಆತನು ದೇವನನು ಕಂಡಿಹನು. ನೀನೂ ದೇವನನೂ ಕಾಣಬಯಸಿದರೆ ಅಲ್ಲಿಗೆ ಹೋಗಿ ಆತನಿಗೆ ಕೇಳಿಕೊ' ಎಂದು ಬಲ್ಲವರು ಹೇಳಿದರು. ಅದನು ಕೇಳಿ ಆತನನು ಕಾಣಬಯಿಸಿ ಕಟ್ಬಾರಣ್ಯವನು ಸುತ್ತಿಸುತ್ತಿ ಹೊರಟೆ. ಹೀಗೆ ಏಸೇಸೋ ಅರಣ್ಯಗಳನ್ನು ದಾಟಿದಮೇಲೆ ಒಂದು

ಹೊನ್ನ ನಗರ ಹತ್ತಿತು. ಅಹಾ! ದೇವಾ!! ಅದು ಎಂಥ ಸುಂದರ ವಾದ ನಗರ! ನೆನಪಾಗಲು ನಿನ್ನೆಡೆ ಓಡಿಬರುವ ಮನವನ್ನು ಅದು ಹಿಂದಕೆಳೆದುಕೊಳ್ಳುವುದು. ದೇವೇಂದ್ರನ ನಗರ ಇದರ ತುಲನೆಗೆ ಸರಿಬಾರದು. ಅಲ್ಲಿ ಬೆಡಗಿನ ಭುವನೆಗಳೇಸು! ನಯನ ಮನೋಹರ ವಾದ ಉಪವನಗಳೇಸು!! ವಿಸ್ತೀರ್ಣವಾದ ರಾಜಬೀದಿಗಳೇಸು!!! ಎಲ್ಲವು ಸೊಗಸುಸೊಗಸಾಗಿ ಶೋಭಿಸುವವು. ಪಚ್ಚ ಮಣಿಗಳನ್ನು ಗಚ್ಚಾಗಿ ಮಾಡಿ ಹೊನ್ನದಿಟ್ಟಿಗೆಗಳಿಂದ ಕಟ್ಟಿದ ಏಳುಪ್ಪರಿಗೆಯ ಮನೆಗಳ ಸುತ್ತೂ ಚಿನ್ನದ ಎಸಳುಗಳ ಹೂಗಳು ತೂಗಾಡುತ್ತಿದ್ದವು. ಇಂದ್ರ ನೀಲಗಳಿಂದ ಕೆಚ್ಚಿದಂತಿರುವ ಝೇಂಕರಿಸುವ ಭ್ರಮರಾಳಿಗಳು ಅಲ್ಲಲ್ಲಿ ಅದರ ಸುತ್ತೆಲ್ಲ ಸುತ್ತುತ್ತಿದ್ದವು. ಅದರ ಮೇಲೆಡೆಯಲ್ಲಿ ತರತರದ ರತ್ನಗಳಿಂದ ಮಾಡಿದ ಚೆಲುವಾದ ಹಕ್ಕಿಗಳು ಹಾರುತಲಿದ್ದವು. ಮೋರೆ ಮೇಲಕೆತ್ತಿ ಕಣ್ಣುಗಳನ್ನು ಬಿಟ್ಟು ಅವೆಲ್ಲವನು ನೋಡಿದೆ. ಆಗ ನಿನ್ನೆಡೆ ಹರಿವ ಮನವು ಒಂದಿನಿತು ತಡೆಯಿತು. ತಡೆದು ನಿಂತು "ಇಂಥ ಭುವನಗಳನ್ನು ತಮ್ಮ ಭೋಗೋಪ ಭೋಗಗಳಿಗಾಗಿ ಉಪಯೋಗಿಸುವವರು ಧನ್ಯರಲ್ಲವೆ!" ಎಂದು ಮನವು ತನ್ನಲ್ಲಿ ತಾನುಸುರುವುದೇ ತಡ, ಆ ಬಂಗಾರದ ಮನೆಯಿಂದ ಒಬ್ಬ ಕಪ್ಪು ಮೈಯ ಸುಳ್ಳುರೀವಿಯನ್ನು ಮಾಡಿಕೊಂಡ ವೃದ್ಧನೊಬ್ಬನು ಝಣ ಝಣರೆಂದುಲಿಯುವ ಕಿರುಗೆಜ್ಜೆಗಳನ್ನು ಕಟ್ಟಿಕೊಂಡ ತನ್ನ ಪಾದ ಗಳನ್ನು ಪಟಪಟನೆ ಇಡುತ್ತ ನನ್ನೆಡೆಗೆ ಬಂದು ನನ್ನ ಕೈಗಳನ್ನು ಹಿಡಿದು ತನ್ನ ರಮ್ಯವಾದ ಭವನದಲ್ಲಿ ಕರೆದೊಯ್ದನು. ಅಲ್ಲಿಯ ಸೊಬಗನೆಲ್ಲವನು ತೋರಿಸಿದನು. ರತ್ನದ ರಸವನ್ನು ತುಂಬಿಟ್ಟಂತೆ ತೋರುವ ಕಾಜಿನ ಹೂಜೆಯೊಂದನ್ನು ತೋರಿಸಿ ಇದು ದಾಳಿಂಬ ರಸದ ಹೂಜೆ ಎಂದನು. ಮತ್ತೊಂದಕ್ಕೆ ಇದು ದ್ರಾಕ್ಷರಸದ್ದು ಎಂದನು. ಹೀಗೆ ಬಾಯಿಗೆ ನೀರಿಳಿಸುವ ಏಸೇಸೋ ಹೂಜೆಗಳನ್ನು ತೋರಿಸಿದ ಮೇಲೆ ಊಟದ ಮನೆ, ಉಗ್ರಾಣದ ಮನೆಗಳನ್ನೆಲ್ಲ ತೋರಿಸಿ ನೃತ್ಯಶಾಲೆ, ಗೀತಶಾಲೆಗಳ ಕಡೆಗೆ ಬಂದನು. ಅಲ್ಲಿರುವ

ಶಯನ ಮಂದಿರವನ್ನು ತೋರಿಸಲು ನಡೆದನು. ಅಲ್ಲಿ ಮಯೂರ ಮಂಚದ ಮೇಲೆ ಮುಟ್ಟಿದರೆ ಮಾಸುವ ಹಾಸಿಗೆಯನ್ನು ಹಾಸಿ, ಅದರ ಮೇಲೆ ನೋಡಿದರೇ ಬಾಡುವ ಸುವಾಸನೆಯ ಸೊಗಸಾದ ಹೂಗಳನ್ನು ಹರವಿದ್ದರು. ನಾನದೆಲ್ಲವನ್ನು ನೋಡುತ್ತ ಕೇಳುತ್ತ ದಿಙ್ಮೂಢನಾಗಿ ನಿಂತಿರಲು 'ಮಗು! ನೀನೆಲ್ಲಿ ಹೋಗುವಿಯಪ್ಪಾ? ಬೇಡ! ನೀನು ಕಷ್ಟಕ್ಕೆ ಗುರಿಯಾಗುವೆಯೆಂಬುದು ನನಗೆ ಗೊತ್ತು. ಆ ಕರಾಳವಾದ ಕಷ್ಟಕ್ಕೆ ಗುರಿಯಾಗದೆ ಈ ಸಿರಿ ಸೊಬಗನೆಲ್ಲವನು ಭೋಗಿಸು. ಇದೆಲ್ಲವನು ನಾನು ನಿನಗೆ ನೀಡುವೆನು.' ಎಂದು ಹಿತವಂತ ಬಂಧುವಿನಂತೆ ನನ್ನ ಗಲ್ಲಗಳನ್ನು ಮುಟ್ಟಿ ಆತನು ಹೇಳುವುದೇ ತಡ, ದೇವಾ! ನಿನ್ನ ನೆನಹು ನನಗೆ ಮತ್ತೆ ಎಲ್ಲಿಂದಲೋ ಬಂದುಬಿಟ್ಟಿತು. ನಿನ್ನ ಹಂಬಲವು ಹಿರಿದಾಗಲು ಆತನಿಂದ ಕೊಸರಿಕೊಂಡು ಓಡಿ ಬಿಟ್ಟೆನು. ಆತನೂ ನನ್ನ ಬೆನ್ನು ಬಿಡದೆ ಓಡಿದನು. ಒದರಿದನು. ಏನನೂ ಕೇಳದೆ ಓಡುತ್ತ ಊರನ್ನೂ ದಾಟಿಯೇ ಬಿಟ್ಟೆನು. ದೇವಾ! ಊರು ದಾಟುವುದೇ ತಡ! ಎಂಥ ಭಯಾನಕ ದೃಶ್ಯ. ಕೊಳ್ಳಗಳೇನು ಕೊರಕಲಗಳೇನು! ಎಡವುತ್ತ ಮುಗ್ಗುತ್ತ ಅವೆಲ್ಲವನು ದಾಟಿ ಮುಂದಿರುವ ಕಟ್ಟಾರಣ್ಯಕ್ಕೆ ಕಾಲಿಟ್ಟೆ. ಅಲ್ಲಿಯ ದುಃಖಗಳೆನಿತು ಪೇಳಲಿ ದೇವಾ! ಆ ಮುನಿ ದೇವನನ್ನು ಹುಡುಕಿ ಹುಡುಕಿ ಹೈರಣಿಸಿ, ಹೈರಣವು ಹಿರಿದಾದಾಗ ಒಂದು ಗಿಡದಡಿ ಸುಮ್ಮನೆ ಬೀಳವೆಳಿಸಿ ಅದರ ಹತ್ತರ ಹೋಗುವುದ ರಲ್ಲಿಯೇ ಆರಿದ ಅಗ್ನಿಕುಂಡವೊಂದರ ಕುರುಹು ಕಾಣತೊಡಗಿತು. ದೇವಾ! ಅದರ ಹತ್ತಿರದಲ್ಲಿಯೇ ನಿನ್ನ ಕಂಡ ಆ ಮುನಿ ಇರುತ್ತಿದ್ದ ನಂತೆ. ತಪಗೆಯ್ಯುತ್ತಿದ್ದನಂತೆ. ಈಗ ಅದೆಲ್ಲವನು ಬಿಟ್ಟು ಆತನು ಎಲ್ಲಿಯೋ ಹೋಗಿದ್ದಾನಂತೆ. ಅದನು ಕೇಳಿದೊಡನೆಯೇ ನನ್ನ ಪ್ರಾಣಹಾರಿಹೋದಂತಾಯಿತು. ಆಗ ಕಳವಳಿಸಿದ್ದೂ ಕಾತರಿಸಿದ್ದೂ ಲೆಖ್ಖವಿಲ್ಲ.'' ಎಂದು ಅನ್ನುತ್ತ ಮತ್ತೆ ಉಸರುಗರೆಯುವನು. ಕಣ್ಣುಮುಚ್ಚುವನು. ಒಂದೆಡೆಗೆ ಬಿದ್ದಿರುವ ಕತ್ತನ್ನು ಮತ್ತೊಂದೆಡೆ ಚೆಲ್ಲುವನು. ಕತ್ತನ್ನುಚೆಲ್ಲಿ ''ದೇವಾ! ಇಷ್ಟಕ್ಕೆಮುಗಿಯಿತೆನ್ನುವಿಯಾ?

ಇಲ್ಲ. ನಿನ್ನನ್ನು ಮತ್ತೆ ಕಂಡ ಕಂಡಲ್ಲೆಲ್ಲಾ ಹೀಗೆ ಅರಸತೊಡಗಿದೆ. ಕಡೆಗೆ ಒಬ್ಬ ಹಿರಿಯ ಬಂದು ನಾನಳುವುದನು ಕಂಡು 'ಸಾವಿರ ಕೊಳದಾಚೆ ಕಿಕ್ಕಿರಿದ ಮುಳ್ಳು ಬನದಲ್ಲಿ ಆ ಮುನಿಯಿಹನು. ಆತನು ದೇವನನು ಕಂಡಿಹನು. ನೀನು ಆತನನು ಅರಸಿ ಆತನಿಗೆ ಕೇಳಿಕೊ' ಎಂದನು. ಅದನು ಕೇಳಿ ಮತ್ತೆಹೊರಟೆ. ದೇವಾ! ಆಗಿನ ಗೋಳ ನೇನೆಂದು ಬಣ್ಣಿಸಲಯ್ಯಾ? ಹೀಗೆ ಆ ಮುನಿಯನ್ನು ಹುಡುಕುತ್ತ ಹುಡುಕುತ್ತ ಹೊರಟಿರುವಲ್ಲಿ ಕನ್ಯೆಯರ ಒಂದು ನಗರ ಹತ್ತಿತು. ಅಹಾ! ಎಂಥ ನಗರವದು!! ಬಣ್ಣಿಸಲು ನನಗೆ ಬಾಯಿಯಿಲ್ಲವಲ್ಲ!!! ಇಲ್ಲಿರುವವರೆಲ್ಲಾ ನವಯವ್ವನದ ಮದದಲ್ಲಿ ಮೆರೆಯುವ ಹೆಂಗಳೆಯರೆ! ನಾನು ಹಾದುಹೋಗುವ ರಾಜ ಬೀದಿಯಲ್ಲಿ ಒನಪಿನೊಯ್ಯಾರಗೆಯ್ಯುತ್ತ ಅವರು ನಿಂತುಕೊಂಡಿದ್ದಾರೆ. ಒಬ್ಬಳು ಮುಗಿಲು ಬಣ್ಣದ ಸೀರೆಯನ್ನುಟ್ಟುಕೊಂಡಿದ್ದರೆ ಮತ್ತೊಬ್ಬಳು ಮುಂಜಾವಿನ ರಾಗರಸವನ್ನೇ ಸುತ್ತುಕೊಂಡಂತೆ ಕಾಣುತ್ತಿದ್ದಳು. ಮಗದೊಬ್ಬಳು ಹಿರಣ್ಯವರ್ಣದ ಸೀರೆಯನ್ನುಟ್ಟಿದ್ದರೆ ಅವಳ ಹತ್ತಿರದಾಕೆ ನವಿಲ ಬಣ್ಣದ ಪತ್ತಲವನ್ನುಟ್ಟು ನರ್ತಿಸುತ್ತಿದ್ದಳು. ಹೀಗೆ ಏಸು ಹೆಂಗಳೆಯರೋ ಹೇಳಲಾರೆನು. ಒಬ್ಬರಿಗಿಂತ ಒಬ್ಬರು ಮೇಲಾಗಿ ಲೋಲಾಡುತ್ತಿದ್ದರು. ಅವರು ತಮ್ಮ ನೀಳ್ಗೈಗಳಲ್ಲಿ ಧರಿಸಿದ ರನ್ನ ಕಡಗುಗಳ ಬೆಡಗೇನು? ಮುಡಿ ಮೈಗಳ ಠೀವಿಯೇನು!! ಝುಣರೆಂದುಲಿಯುವ ಹೊನ್ನಪೈಜಣಗಳ ಮನಮೋಹಕತೆಯೇನು!!! ಎಲ್ಲವೂ ಅವರ್ಣನೀಯವೆ. ನಾನು ಹಾದಿ ಹಿಡಿದು ಹೋಗುತ್ತಿರುವಾಗ ನನ್ನ ಸುತ್ತೆಲ್ಲ ಸುಳಿಯುವರು. ಮನವನೊಲಿಸಲೆಂದು ಶಿಬಿರ ಹುಬ್ಬನ್ನು ಹಾರಿಸಿ ಚಕ್ರಗಣ್ಣುಗಳನ್ನು ತಿರುಗಿಸುವರು. ಎದೆಯುಬ್ಬಿಸಿ ಮುಗಳು ನಗೆ ನಗುವರು. ತಮ್ಮ ಕೈಗಳಲ್ಲಿ ಕಸುಮಕರಂಡಕಗಳನ್ನು ಹಿಡಿದು ನನ್ನಿದಿರು ಮೆಲ್ಲಮೆಲ್ಲನೈತರುವರು. ಎಸಳುಗಣ್ಣಿನಲ್ಲಿ ಹರಿದಾಡುವ ಕರಿಯಾಲಿಯನ್ನು ಮೇಲಕ್ಕೇರಿಸಿ ಹುಬ್ಬುಗಳನ್ನು ಕುಣಿಸುವರು. ತುಟಿಗಳನ್ನು ಹಿಗ್ಗಿಸುವರು. ಅದುರಿಸುವರು. ಅದುರಿಸುತ್ತಲೇ ದಂತಕಾಂತಿಯನ್ನೆರಚಿ

ಕಿರುನಗೆಯ ತೆರೆಗಳನ್ನು ತೂರುವರು. ಇಷ್ಟರಲ್ಲಿ ಕಳ್ಳದನಿಯೋಳು ಹಾಡ ಹೆಣೆಯುತ ಹಿಂದೆ ಸರಿಯುವರು. ಹಾಡನು ಕೇಳಲೆಳಸಿ ನಾನು ಅವರೆಡೆ ಕಿವಿಗೊಡಲು ತರತರದಿ ಅಭಿನಯಿಸುತ ಕೈಬೀಸಿ ನನ್ನೆಡೆ ಕುಸುಮುಗಳನೆಸೆಯುವರು. ಮತ್ತೆ ನಗುವರು. ದೇವಾ! ಅವರಲ್ಲಿ ಎಂಥೆಂಥ ಮೋಹನಾಸ್ತ್ರಗಳಿದ್ದವಲ್ಲಾ! ನನ್ನನ್ನು ಬಂಧಿಸುವುದಕ್ಕಾಗಿ ಆ ಎಲ್ಲ ಅಸ್ತ್ರಗಳನ್ನು ಎಷ್ಟು ರೀತಿಯಿಂದ ಉಪಯೋಗಿಸಿದರು!! ಹೃದಯವನ್ನು ಹಿಂಸಿಸಿದರು!!! ಎದೆಯುಬ್ಬಿಸಿ ಮುಂದೆ ಬಂದು ಅವರು ನರ್ತಿಸುತ್ತಿದ್ದಾಗ ನನ್ನ ಕೈಯ ಕಟ್ಟುಗಳಿಂದ ಅವರನ್ನು ಬಿಗಿಯಾಗಿ ಅಪ್ಪಲೆಳಸುತ್ತಿದ್ದೆನು. ಅವರೊಡನೆ ಕೂಡಿರಲು ಬಯಸುತ್ತಿದ್ದೆನು. ಮನವು ಹೀಗೆ ಹರಿದುಹೋಗುವುದರಲ್ಲಿಯೇ ನಿನ್ನ ನೆನಹು ಹಿಡಿದೆಳೆದು ನನ್ನನ್ನು ಅರುವಿಗೆ ತರುತಲಿದ್ದೀತು. ಎಚ್ಚರಿಕೆ ಬಂದೊಡನೆ ಅವರನ್ನು ತೊರೆದು ಓಡಿ ಬಿಡುತ್ತಿದ್ದೆ ಮತ್ತೆ ಅವರು ನೆರೆದು ಬಂದಾಗ ಮತ್ತಷ್ಟು ಭರದಿ ಓಡುತಿದ್ದೆ. ಹೀಗೆ ಓಡುತ್ತ ಓಡುತ್ತ ಆ ಯುವತಿಯರನ್ನೊಮ್ಮೆ ದಾಟಿದ ಮೇಲೆ ಹಿಂದಿರುಗಿ ನೋಡಿದೆ. ಆ ಕಾಮಿನಿಯರೆಲ್ಲ ಹೋಗಿಬಿಟ್ಟಿದ್ದರು. ಆಗ ಏನೋ ಒಂದಿಷ್ಟು ಮನ ಮಿಡುಕಿತು. ಅವರನ್ನು ಕೂಡಿಕೊಂಡಿದ್ದರೆ ಒಳಿತಾಗುತ್ತಿತ್ತೊ ಏನೋ ಎಂದಿತು. ಅವರಡೆಗೆ ತಿರುಗಿ ಹೋಗಲು ಧಾವಿಸಿತು. ಆಗ ಒಮ್ಮೆಲೆ ನಿನ್ನ ನೆನಹಿನ ಕೂರಲಗು ನನ್ನ ಹೃದಯದಲ್ಲಿ ಚುಚ್ಚಿ ಅದೆಲ್ಲವನು ಮರೆಯಿಸಿತಲ್ಲದೆ, ಮುಂದಿನ ದುಃಖಾರಣ್ಯಕ್ಕೆ ಅಡಿಯಿಡಿಸೀತು. ದೇವಾ! ಅದರ ಮುಂದಿನ ತಪ್ಪ ಮತ್ತೆ ಮತ್ತೆ ಏನು ಬಣ್ಣಿಸಲಿ? ಸಂಕಟಗಳನ್ನನುಭವಿಸುತ್ತ ಅನುಭವಿಸುತ್ತ ಆ ಮುನಿದೇವನನು ಅರಸಿದೆನು. ಮೊದಲಿನಂತೆ ಈ ವನವನ್ನೂ ಆತನು ಬಿಟ್ಟುಹೋದುದು ಗೊತ್ತಾಗಲು ಮುಂದಿನ ಹಾದಿ ತೋಚದವನಾಗಿ ಕಂಗೆಟ್ಟೆನು. ಕಂಗೆಟ್ಟು ಆ ಮುನಿದೇವನನು ಹುಡುಕಲು ಮತ್ತೆ ಈ ಮಗದೊಂದು ವನಕ್ಕೆ ಬಂದೆನು. ಆತನಲ್ಲಿಯೂ ಇಲ್ಲದುದರಿಂದ ಬಳಲುತ್ತಿರುವೆನು. ದೇವಾ! ನೀನು ಕಾಣುವುದಂತೂ ಒತ್ತಟ್ಟಿಗಿರಲಿ, ನಿನ್ನ ಕಂಡವರನ್ನಾರದರೂ ನಾನು ಕಾಣಬಾರದೆ?"

ಎಂದು ದುಃಖಿಸತೊಡಗುವನು. "ದೇವಾ! ನಿನ್ನ ಕಂಡವರ ಕಾಣುವುದು ನನಗೆ ಬೇಕಿಲ್ಲ ನಿನ್ನ ಕಾಣುವುದು ನನಗೆ ಬೇಕಾಗಿದೆ. ನಿನ್ನನ್ನೇ ಕಾಣುವೆ. ನಿನ್ನನ್ನು ಕಂಡು ನನ್ನೊಡಲ ಶಾಂತಿಯನ್ನು ಮಾಡಿಕೊಳ್ಳುವೆ" ಎಂದು ಆ ಕಿಶೋರನು ಕಣ್ಣೀರು ಸುರಿಸುತ್ತ ಮತ್ತೆ ಮತ್ತೆ ಪ್ರಲಾಪಿಸುವನು, ದೇವನನು ಕೂಗುವನು. "ಹಾ! ತಂದೆ!! ಎಲ್ಲಿರುವಿ?" ಎಂದು ಕೇಳುವನು. ಮಾರುದನಿ ಬರದಿರಲು ಹೊರಳಾಡುವನು. ಹೊರಳಿ ಹೊರಳಿ ಮುಖವೆಲ್ಲ ಹಡಿಯಲ್ಲಿ ಮುಳುಗಿಸುವನು. ಮತ್ತೆ ಮತ್ತೆ ಶೋಕಿಸುವನು. ಕೈಮಾಡಿ ಕರೆಯುವನು. ಒಮ್ಮೆ ತರುಮರಾದಿಗಳಿಗೆ ಒಮ್ಮೆ ಹೂ ಬಳ್ಳಿಗಳಿಗೆ ಬಿನ್ನವಿಸುವನು. ಕಲ್ಲು ಕಂದರಗಳಲ್ಲಿ ಮೊರೆಯಿಡುವನು. "ದೇವನಿರುವನೆ? ಎಲ್ಲಿರುವನು??" ಎಂದು ಪ್ರಶ್ನಿಸುವನು. ಉತ್ತರವು ಬಾರದಿರೆ ಮತ್ತೆ ಹೊರಳಾಡುವನು "ಎನಗೇಕೆ ಹೇಳದಿರುವಿರಣ್ಣಾ? ನಾನು ಮಾಡಿದ ಅಪರಾಧವೇನಿಹುದು??" ಎಂದುಕೊಳ್ಳುವನು. "ಮೇಲೆಹಾರುತಿರುವ ಎಲೆ ಹವಳ ಚುಂಚಿನ ಹಕ್ಕಿಯೆ! ನೀನೇನು ಮಾತನಾಡುತಿರುವಿ? ನಿನ್ನ ಮಾತು ನನಗೆ ತಿಳಿಯಲಾರದು ಅಣ್ಣಾ!! ಹೇಳು, ನನಗೆ ತಿಳಿಯುವಂದದಿ ಹೇಳು. ದೇವನಿಹನೆ? ಎಲ್ಲಿಹನು?? ಆತನನು ಕಂಡು ಆತನೊಡನೆ ಮಾತನಾಡಿದಿಯಾ? ಹೀಗೆಯೇ ಇದೇ ಬಂದಿಯಾ??....ಎಲೆ ಕೋಗಿಲೆಯೆ! ಏನು ಹಾಡುತಿರುವಿ?? ಯಾರಿಗಾಗಿ ಹಾಡುತಿರುವಿ?? ಏನನ್ನು ಹಾಡುತಿರುವಿ! ಎನಗೆ ತಿಳಿಯಲೊಲ್ಲದು ತಾಯಿ! ನನಗೆ ತಿಳಿಯುವಂದದಿ ಏಕೆ ಹಾಡಲೊಲ್ಲಿ? ನಿನ್ನ ಹಾಡಿನಲ್ಲಿ ಆ ದೇವನ ರೂಪವನ್ನು ವರ್ಣಿಸುವಿಯಾ? ಗುಣಗಳನ್ನು ಬಣ್ಣಿಸುವಿಯಾ?? ಏನನ್ನು ಬಣ್ಣಿಸುವಿ??? ಎಲೆ ನವಿಲೆ! ನೀನು ಕುಣಿಯುವುದು ಯಾರಿಗಾಗಿ? ಯಾರ ಇದುರಿನಲಿ ಕುಣಿಯುವಿ? ತನ್ನ ಕರತಾಲಗಳನ್ನಿಕ್ಕಿ ಯಾವನು ನಿನ್ನ ಕುಣಿತಗಳನ್ನೆಬ್ಬಿಸುತ್ತಿಹನು?? ಇಂಥ ಸೊಬಗಿನ ಬಣ್ಣವನು ಕೊಟ್ಟು ನಿನ್ನನ್ನು ಶೃಂಗರಿಸಿದವನಾವನು? ಆ ದೇವನು ನಿನ್ನನ್ನು ಶೃಂಗರಿಸಿದನೆ?? ನೀನವನ ಕಂಡಿರುವಿಯಾ???" ಎಂದು ಹಕ್ಕಿ

ಗಳಿಗೆಲ್ಲ ಕೇಳುವನು. ಅವು ಮಾತನಾಡದಿರಲು ನೊಂದುಕೊಳ್ಳು ವನು. ಕಣ್ಣೀರುಗರೆಯುವನು. ಅವನ್ನೊರಿಸಿಕೊಂಡು ಮತ್ತೆ ಕೇಳುವನು. "ಎಲೆ ಅಣ್ಣಗಳಿರಾ! ನನ್ನ ಮಾತುಗಳನ್ನುಪೇಕ್ಷಿಸಿ ಮೌನವಾಗಿ ಏಕೆ ಹೊರಡುವಿರಿ? ನನ್ನ ಪಡಲದಾಹ ನೀವರಿಯ ಲಾರಿರಿ. ನಿಲ್ಲಿ, ನಿಲ್ಲಿ, ನನ್ನಿದಿರು ಸ್ವಲ್ಪ ನಿಂತುಕೊಂಡು ನನ್ನೊಡಲ ಪರಿಯನರಿತುಕೊಳ್ಳಿರಿ. ಅರಿತು ಆ ದೇವನ ಸುದ್ದಿಯನ್ನು ಎನಗೆ ಹೇಳಿರಿ. ಅವನಿಲ್ಲದಿದ್ದರೆ ಖಂಡಿತವಾಗಿ ಇಲ್ಲವೆಂದು ಹೇಳಿಬಿಡಿರಿ. ನಾನು ನಿಶ್ಚಿಂತವಾಗಿ ಈ ಜೀವನದಿಂದ ನಿವೃತ್ತನಾಗುವೆ. ಎಲೆ ಹಕ್ಕಿ ಗಳೆ! ಇಷ್ಟು ಮಾತನಾಡಿದರೂ ಒಂದುತ್ತರವನ್ನೂ ಕೊಡದೆ ಹಾಗೇ ಹೊರಟಿರುವಿರಲ್ಲಾ! ನಿಶ್ಚಯವಾಗಿ ಇಲ್ಲವೆಂದೇ ಹೇಳುವಿರಾ? ಮೌನ ವಾಗಿ ಹೋದವಲ್ಲ! ಮೌನವಾಗಿ ಹೋಗಿಯೇ ಬಿಟ್ಟವಲ್ಲ !!...."ಎಲೆ ಕುಸುಮುಗಳೆ! ನೀವಾದರೂ ಹೇಳಲಾರಿರಾ ದೇವನ ಇರವನ್ನು? ನೀವು ಕೋಮಲೆಯರು. ಕೋಮಲೆಯರೆಂದು ಕವಿಗಳೆಲ್ಲಾ ನಿಮ್ಮನ್ನು ಮನಬಿಚ್ಚಿ ವರ್ಣಿಸಿರುವರು. ಈಗ ನನ್ನೊಡನೆ ಮಾತನಾಡಿ ಆ ದೇವ ನಿರವನ್ನು ಹೇಳುವುದರಲ್ಲಿ ನಿಮ್ಮ ಹೃದಯವನ್ನು ಕಾಠಿಣ್ಯವ ನ್ನಾಗಿ ಮಾಡಿಕೊಳ್ಳಬೇಡಿರಿ. ಸೊಗಸಾದ ಸುಗಂಧ, ನಯನ ಮನೋಹರವಾದ ರೂಪು, ಕವಿಕುಲದ ಬಗೆಯನ್ನು ನೀರುಗೊಳಿಸಿದ ಕೋಮಲತೆ ಇವೆಲ್ಲವುಗಳನು ನೀವು ಹುಟ್ಟುವುದಕ್ಕೆ ಮೊದಲು ಯಾವ ಅತಳವಾದ ಗರ್ಭದಲ್ಲಿ ಯಾವಾತನು ಬಚ್ಚಿಟ್ಟಿದ್ದನು? ಈಗ ದನು ರೂಪುಗೊಳಿಸಿದವನಾವನು?? ರೂಪುಗೊಳಿಸಿದ ಆ ದೇವನನು ನೀವು ಕಂಡಿರುವಿರಾ??? ಹೇಳಿ, ಎಲ್ಲಿ ಕಂಡಿರುವಿರಿ ಆತನು ನಿಮ್ಮೊ ಡನೆ ಮಾತನಾಡಿದನೆ??" ಎನ್ನುತ್ತ ಆಲಪರೆದು ಹೂಗಳಿಗೆ ಕೇಳು ವನು. ದೈನಾಸಬಟ್ಟು ಅವುಗಳಡಿಗೆ ಬಿದ್ದುಕೊಳ್ಳುವನು. ಅವು ಮಾತನಾಡದಿರಲು ಮತ್ತೆ ಅಳುವನು. ಮತ್ತೆ ಕೇಳುವನು. ಇನಿ ತರಲ ಹಗಲರಸಿಯು ಮೊರೆ ಕೇಳದೆ ಓ ಸರಿಸಲು ಕಣ್ಣು ಮನಗ ಳನೆಲ್ಲಿ ಕತ್ತಲೆಗವಿಸುವ ಕರಾಳರಾತ್ರಿಯು ಭುವನವನೆಲ್ಲ ಮುಸುಕಿ ಕೊಂಡಿತು.

೩

ದಕ್ಷಿಣಾಭಿಮುಖವಾಗಿ ಗಂಗೆ ಸಾಗಿಪ್ಪಾಳೆ ಮಂದ ಗಮನೆಯಾದ ಅವಳ ಜಗನ್ಮೋಹಿನಿ ಕಂಕಣಗಳ ರವವು ಆ ನಿಶ್ಶಬ್ದವಾದ ಕಾಂತಾರದಲೆಲ್ಲ ವ್ಯಾಪಿಸಿಕೊಂಡಿದೆ. ಅದರ ದಡದಲ್ಲಿ ವಿಶಾಲವಾಗಿ ಬೆಳೆದಿರುವ ಮಾಮರಗಳ ಕೊಂಬೆಯೊಳು ಕುಳಿತು ಹಲವು ತರದ ಹಕ್ಕಿಗಳು ಆ ರವಕೆ ತಮ್ಮ ಇಂಚರವ ಬೆರೆಸುತಿಹವು. ನೀರ್ವಕ್ಕಿಗಳು ಅತ್ತಿತ್ತ ಹಾರಿ, ಮುಗಿಲೆಲ್ಲವನು ಸುತ್ತಿ ನೀರಿನಾಳವನು ನೋಡುತಿಹವು. ಇಂಥ ಸಮಯದಲ್ಲಿ ಆ ಕಿಶೋರನು ದಡವೊಂದರಲಿ ಕುಳಿತು ಏನನೋ ಬಗೆಯುತಿಹನು. ಚಿಂತಿಸುತಿಹನು. ಆತನು ಕೂತ ಭಂಗಿಯು ಮನದ ಭಾವವನ್ನು ಪ್ರಕಟಿಸುತ್ತಿದ್ದುದು ಅಚ್ಚರಿಯಲ್ಲ. ತನ್ನ ಕೈಗಳೆರಡರಿಂದಲೂ ಕಾಲುಗಳನು ಕಟ್ಟಿ ಮೊಳಕಾಲ ಮೇಲೆ ಗೋಣನ್ನು ಚೆಲ್ಲಿ ಅರೆ ತೆರೆದ ಕಣ್ಣುಗಳಿಂದ ಧಾರೆ ಧಾರೆಯಾಗಿ ಕಣ್ಣೀರ ಸುರಿಸುತ್ತಿದ್ದುದು ಆತನ ಹೃದಯ ತಾಪದ ಕುರುಹಲ್ಲದೆ ಮತ್ತೇನು ? ಆತನ ಬಗೆಯ ಸಪ್ತಕೋಟಿ ಸಿಡಿಲಿನ ಸಂತಾಪವು ಆ ರಮ್ಯವಾದ ಸೃಷ್ಟಿಯ ಅರಿವನ್ನು ಎಲ್ಲಿಯೋ ಕೊಚ್ಚಿಕೊಂಡು ಹೋದುದರಿಂದ, ಬಾಹ್ಯ ಪ್ರಜ್ಞೆಯು ಆತನಿಂದ ಅಗಲಿ ಹೋಗಿದ್ದಿತು.

ಈಗ ಆತನ ತಲೆಯಲ್ಲಿ ಈಚೆಗಿನ ಜಗವಿಲ್ಲ ಆಚೆಗೆಲ್ಲೋ ಈಸುತ್ತಿದ್ದನು. " ಈ ಸ್ಥೂಲ ಜಗದಾಚೆಯಲ್ಲಿ ಸೂಕ್ಷ್ಮ ಜಗವುಂಟೆ? ಈ ಮಣ್ಣ ಮೈಯನ್ನೊಗೆದು ಹಾರಿ ಹೋದ ಜೀವಕ್ಕೆ ಮತ್ತೊಂದು ಜಗದಲ್ಲಿ ಬೇರೆ ಜೀವನವುಂಟೆ ??" ಎಂಬುದನು ತಿಳಿದುಕೊಳ್ಳುವ ಬಗೆ ಆತನಲ್ಲಿ ಹಿರಿದಾಗಿತ್ತು. " ಈ ಸ್ಥೂಲ ಜಗದಾಚೆ ಸೂಕ್ಷ್ಮ ಜಗವುಂಟಾದರೆ ಇದರ ಸೂಕ್ಷ್ಮಾತಿ ಸೂಕ್ಷ್ಮ ಜಗಗಳಾಚೆಯಲ್ಲಿ ದೇವನ ಇರವು ಏಕೆ ಇರಬಾರದು ? " ಎಂದು ಬಗೆಯುತ್ತಿಹನು.

ಕುಳಿತವನು ಎದ್ದು ನಿಲ್ಲುತ್ತಾನೆ. ತನ್ನ ಕಾಲುಗಳನ್ನು ಸುತ್ತಿಕೊಂಡ ಆತನ ಕೈಗಳು ಈಗ ಎದೆಯ ಮೇಲೆ ತಮ್ಮನ್ನು ತಾವೇ

ಹಿಡಿದು ಕೊಂಡಿವೆ. ನೆಲವನ್ನು ನೋಡುತ್ತ ಸಾವಕಾಶವಾಗಿ ಹೆಜ್ಜೆ ಇಡುವನು. ಏನನೋ ಭಾವಿಸುವನು. ತಡೆದು ಮತ್ತೆ ಒಂದು ಹೆಜ್ಜೆ ಇಡುವನು ಮತ್ತೆ ನಿಲ್ಲುವನು. ಕಣ್ಣೀರು ಮಿಂಚುಗಟ್ಟಿ ದೃಷ್ಟಿ ಮಸುಕಾಗಲು ಕೈಗಳನು ಬಿಚ್ಚಿ ಅವನ್ನೊರಿಸಿ ಕೊಳ್ಳುವನು. ಹೀಗೆ ಒಮ್ಮೆ ನಡೆಯುತ್ತ ಒಮ್ಮೆ ನಿಲ್ಲುತ್ತ ಒಮ್ಮೊಮ್ಮೆ ಭಾವಿಸುತ್ತ ನದಿಯ ನೀರ ಧಡಕ್ಕೆ ಬಂದು ನಿಂತು " ಸಾಯುವೆ!.................... ಸಾಯುವೆ!! ನದಿಯ ಪ್ರವಾಹದಲ್ಲಿ ಬಿದ್ದು ಸಾಯುವೆ!! ಜೀವನದಿ ಏನುಂಟು ಇನ್ನು? ದೇವನಿಲ್ಲದಿರಲು ಏಕೆ ಜೀವಿಸಬೇಕು??........ ........ಕುರುಡು ಸೃಷ್ಟಿ! ಕುರುಡು ಜೀವನ!! ಕುರುಡು ಪ್ರಲಯ!!! ಎಲ್ಲವು ಕುರುಡು! ಅಂಧಂ ತಮಸ್ಸಿನಲ್ಲಿ ಹುಟ್ಟಿ ಅಂಧಂತಮಸ್ಸಿನಲ್ಲಿ ಲಯವಾಗುತಿದೆ. ನಾನು ಈ ಜೀವನವನ್ನು ನೀಗಿದರೆ ಈ ಜಗವನ್ನೇ ನೀಗಿದಂತಲ್ಲವೆ? ಇಲ್ಲಿ ಸತ್ತು ಈ ಜಗವನ್ನು ನೀಗುವೆ. ಬಳಿಕ ಮತ್ತೆಲ್ಲಿಯೋ ಸತ್ತು ಆ ಜಗವನ್ನು ನೀಗುವೆ. ಆ ಮೇಲೆ ಇನ್ನೆಲ್ಲಿಯೋ ಮಡಿದು ಅದರ ಮುಂದಿನ ಜಗವನ್ನು ದಾಟುವೆ, ಹೀಗೆ ಸಹಸ್ರ ಬಾರಿಯಾದರೂ ಸತ್ತು ಸತ್ತು ಸಾವಿರ ಜಗತ್ತುಗಳನ್ನಾದರೂ ದಾಟಿ ದಾಟಿ ಜಗತ್ತುಗಳ ಆಚೆಗಿರುವ ಆ ಶಿವನನ್ನು ಕಾಣುವೆ ಅದಕಾಗಿ ಸಾಯುವೆ! ಅದಕಾಗಿ ಸಾಯುವೆ!!" ಎಂದೆನ್ನುತ್ತ ನೀರೊಳಗೆ ಹೋಗುವನು................" ಏಕೊ ಹಿಂದಕೆಳೆಯುತಿದೆ ಮನವು! ಸಾಯಲು ಮನಸು ಹೆದರುತಿದೆ ಜೀವ!!................ದೇವಾ! ನೀನಿಲ್ಲಿ ಇಲ್ಲದಿರಲು ಮನವು ಇತ್ತ ಕಡೆಗೇಕೆ ಹಿಂದೆಳೆಯಬೇಕು? ಜೀವವು ಏಕೆ ಅಳುಕ ಬೇಕು?? ನೀನೆಲ್ಲಿಯೋ ಕುಳಿತು ನನಗೀ ಗೋಳು ಗೊಳಿಸಲು ಆಟ ಹೂಡಿದಿಯಾ?................ದುಃಖ! ದುಃಖ!! ಆ ದುಃಖ ಸಾಗರದಲ್ಲಿ ಮೊಳೆತ ಸುಖದ ಮೊಳಕೆಗಳನ್ನು ನಾನು ಮುರಿದು ಬಂದಿರುವೆನಲ್ಲಾ! ತಾಯಿಯು ನೀನು ಹೋಗ ಬೇಡ ಮಗು!' ಎಂದು ಅಡ್ಡಗಟ್ಟಿದಳು. " ಹೋಗಬೇಡ ವೆಂದು ನಿನ್ನ ಕಾಲ ಹಿಡಿಯುವೆನು. ಆಗ ನನ್ನನ್ನು ಒದೆದು ಹೋಗುವಿಯಾದರೆ ಆ ಒದದ ಕಾಲನ್ನೇ ಮತ್ತೆ ಹಿಡಿಯುವೆನು' ಎಂದು

ತಾಯಿ ಅಂದಳು 'ನಮ್ಮ ಒಡಲಲ್ಲಿ ಮೂಡಿ ಉಡಿಯಲ್ಲಿ ಆಡಿದ ಕಂದಾ! ನಮ್ಮನ್ನು ಬಿಟ್ಟು ಹೇಗೆ ಹೋಗುವಿ?' ಎಂದು ಕಣ್ಣೀರು ಗರೆದಳು. ಅದೇನನು ಲಕ್ಷ್ಯಿಸದೆ ಅವಳ ಪ್ರೇಮದ ಪಾಶವನ್ನೂ, ಕರುಳಿನ ಕಟ್ಟನ್ನೂ ಹರಿದೊಗೆದು ದೇವನ ಹುಚ್ಚಿನಲ್ಲಿ ತಿರುಗಿದೆನಲ್ಲಾ! ಅವಳ ಹತ್ತಿರವಿದ್ದು ಆಗಾಗ ಅವಳ ದುಃಖವನ್ನು ಶಾಂತಗೊಳಿಸಿದ್ದರೆ ನಾನೆಂಥ ಒಳ್ಳೆಯ ಕೆಲಸವನ್ನು ಮಾಡದಂತಾಗುತ್ತಿದ್ದಿತಲ್ಲಾ!! ಸಾಕು ಸಾಕು ಹುಚ್ಚುತನವಿನ್ನು ಸಾಕು. ಈ ಜಗದಲ್ಲಿ ದೇವನನು ಹುಡುಕುವದೆಂದರೆ ಮರುಭೂಮಿಯಲ್ಲಿ ತಣ್ಣೆಳಲ ನರಸಿದಂತೆಯೇ ಸರಿ. ಹುಟ್ಟಿದ ತಪ್ಪಿಗಾಗಿ ಸಾಯುವವರೆಗಿದ್ದು ನೆರೆಯುವರ ದುಃಖದಲಿ ಭಾಗಿಯಾಗಿ ಇದ್ದ ಸುಖವನ್ನೇ ಹಿರಿದಾಗಿ ಮಾಡಿಕೊಂಡು ಬಾಳುವುದಕಿಂತ ಹೆಚ್ಚಿನದಾವುದು?" ಎಂದಂದು ನದಿಯನ್ನು ಬಿಟ್ಟು ದೂರಬರುವನು. ಬಂದು, ಒಂದು ಗಿಡದ ನೆರಳಿಗೆ ಕೂತುಕೊಳ್ಳುವನು. ತನ್ನ ಬೆವತ ಮುಖವನ್ನು ಬಟ್ಟೆಯಿಂದೊರೆಸಿಕೊಳ್ಳುವನು. ಮೆಲ್ಲಗೆ ಗಾಳಿಯನ್ನಿಕ್ಕಿ ಕೊಳ್ಳುವನು. ಇಷ್ಟರಲ್ಲಿ ಈಗಿನ ನಿಶ್ಚಯವೆಲ್ಲ ಅದುರಿಹೋಗಿ ಮುಂಚಿನ ಭಾವಗಳು ಮತ್ತೆ ಏಳ ತೊಡಗಿದವು. "ಮನ ಶಾಂತವಾಗದು! ಮನ ಶಾಂತವಾಗದು!! ಈ ಶುಷ್ಕ ಜೀವನದಿಂದ ಎಷ್ಟೂ ಮನ ಶಾಂತವಾಗದು!!! ನನ್ನ ಜೀವನವು ವೈಧವ್ಯದ ಜೀವನಕ್ಕಿಂತ ಕೀಳಾಗಿಹುದು." ಎಂದನ್ನುತ್ತ ಮತ್ತೆ ಗೋಳಿಡ ತೊಡಗಿದನು. "ದೇವಾ! ನೀನೆಲ್ಲಿರುವಿ ಎಂಬುದನ್ನು ಹೇಳು. ನೀನೆನಗೆ ಕಾಣದಿರೆ ಬಿಡು. ನಿನ್ನ ಕಾಣುವ ಆಶೆಯನ್ನು ನಾನು ಬಿಟ್ಟು ಬಿಡುವೆನು. ಆದರೆ ನೀನಿರುವ ಭರವಸೆಯನ್ನಾದರೂ ಕೊಡಲಾರೆಯಾ? ನಿನ್ನ ಭರವಸದ ಸುಧೆಯಿಂದ ಅನಂತಕೋಟಿ ಜನ್ಮಗಳಲ್ಲಿ ನಾನು ಜೀವಿಸಿರ ಬಲ್ಲೆನು. ನೀನಿಲ್ಲದಿದ್ದರೆ, ನೀನೆಲ್ಲೆಲ್ಲಿಯೂ ಇಲ್ಲದಿದ್ದರೆ ನಿಮಿಷಾರ್ಧದ ಕೋಟ್ಯಾಂಶ ಭಾಗವಾದರೂ ನಾನಿಲ್ಲಿರಲು ಬಗೆಯುವದಿಲ್ಲ. ಹೇಳು ತಂದೆ! ಇರುವಿಯಾ? ನಿಶ್ಚಯವಾಗಿಯೂ ಇರುವಿಯಾ?? ಈ ಸಮಸ್ತ ಲೋಕಗಳ ಆಗುಹೋಗುಗಳನ್ನೆಲ್ಲಾ ನೀನೇ ನಡಿಸಿರುವಿಯಾ??? ಹೇಳು ತಂದೆ!

ನೀನಿರುವ ಕರುಹತೋರಿಸಿ ಬದುಕಿಸು ತಂದೆ !! ಬದುಕಿಸು !!! ” ಎಂದು ಈ ಪರಿ ಮತ್ತೆ ಹುಚ್ಚನಂತೆ ಕೇಳತೊಡಗುವನು. ಮತ್ತೆ ಮತ್ತೆ ಕೇಳುವನು. ಕೇಳಿ ಗೋಳಿಡುವನು. ಹೀಗೆ ಹಗಲು ಹೊತ್ತೆಲ್ಲಾ ಕಳೆದನು. ಮುಂದೆ ಬರುವ ಇರುಳನ್ನು ಯಾವ ದುಃಖದಂಬುಧಿಯಲ್ಲಿ ತೇಲುತ್ತ ತೇಲುತ್ತ ಕಳೆದನೋ ಭಗವಂತನಿಗೇ ಗೊತ್ತು.

೪

ಆ ಕಿಶೋರನೀಗ ಮತ್ತೊಂದು ವನದಲ್ಲಿ ವಾಸವಾಗಿದ್ದಾನೆ. ಮೊದಲಿನ ಆ ಅಲೆದಾಟವು ಮಾಯವಾಗಿ ಒಂದೆಡೆಗೇ ಇರುವ ಸ್ಥೈರ್ಯವು ಆತನಲ್ಲಿ ನೆಲೆಗೊಂಡಿದೆ. “ ನೆರೆಯವರ ದುಃಖದಲ್ಲಿ ಭಾಗಿಯಾಗಿ ಇದ್ದ ಸುಖವನ್ನೇ ಹಿರಿದಾಗಿ ಮಾಡಿಕೊಂಡು ಬಾಳುವುದಕ್ಕಿಂತ ಹೆಚ್ಚಿನದಾವುದು ? ” ಎಂದು ಅಂದುಕೊಂಡ ಆ ಕಿಶೋರನು ಈಗ “ ಹೆರರ ದುಃಖದಲ್ಲಿ ಭಾಗಿಯಾಗಬೇಕಾದರೆ ಮೊದಲು ತನ್ನ ದುಃಖಗಳು ಕಳೆದು ಹೋಗಬೇಕಷ್ಟೆ ? ಹೃದಯ ತಾಪಗಳು ನೀಗಬೇಕಷ್ಟೆ ? ” ಎಂದು ಬಗೆಯುತ್ತಿದ್ದಾನೆ. “ ಆ ನನ್ನ ದುಃಖ, ಆ ಹೃದಯದ ಕಸವಿಸಿ ಹೇಗೆ ಶಾಂತವಾಗಬೇಕು ? ಅದನ್ನು ಶಾಂತಗೊಳಿಸುವ ಹಾದಿಯೇನಾದರೂ ಇದೆಯೆ ?? ಹಾಗಿರದಿದ್ದರೆ ನಾನು ಬದುಕಿ ಏನು ಫಲ ??? ” ಎಂದು ವಿಚಾರಿಸುವನು. ಅಂತವಿಲ್ಲದ ಸಾಗರದಲ್ಲಿ ಬಿದ್ದು ತೊಳಲಿದಂತೆ ಆತನು ಈ ಆಳವಾದ ವಿಚಾರ ಸಾಗರದಲ್ಲಿ ಬಿದ್ದು ತೊಳಲುವನು. ಆ ತೊಳವಾಟದಲ್ಲಿ ಒಮ್ಮೊಮ್ಮೆ ಆತನು ಬಾಹ್ಯವನ್ನೇ ಮರೆತು ಬಿಡುವನು. ಹೀಗೊಮ್ಮೆ ವಿಚಾರದಲ್ಲಿಯೇ ತಲ್ಲೀನನಾಗಿರುವಾಗ ಆ ಕಿಶೋರನ ಕಲ್ಪನಾಪಟದಲ್ಲಿ ತೇಜೋಮಯವಾದ ಒಂದು ದೇವರೂಪವು ಕಂಡುಕೊಂಡಿತು. ಅದು ಮಸುಮಸುಕಾದ ಚಿತ್ರವಲ್ಲ; ಅತ್ಯಂತ ಪರಿಪೂರ್ಣವಾಗಿ ಮೈದಾಳಿದ ಚಿತ್ರ.

ಅದರ ರೇಖೆ ರೇಖೆಗಳಲ್ಲೆಲ್ಲ ವಿಶ್ವಶಿಲ್ಪಿಯ ದಿವ್ಯಸ್ಫೂರ್ತಿಯು ಕಂಗೊಳಿಸುತ್ತಲಿತ್ತು. ಆ ಮುದ್ದು ಮುಖದಲ್ಲಿ ಗಂಭೀರವಾದ ಮೋಹನಕಾಂತಿ ಸುರಿಯುತಲಿತ್ತು. ಕರುಣೆಗಳ ಸಂತೈಸುವ ಪ್ರಶಾಂತ ವಾದ ಕಣ್ಣುಗಳಿಗೆ ಬಾಗಿದಕೋರೆಹುಬ್ಬು ಒಪ್ಪನಿಡುತಿದ್ದವು. ಮಿರುಗುವ ನಯವಾದ ಕೆನ್ನೆಗಳಲ್ಲಿ ತಿಳಿಗುಲಾಬಿಯ ಶೋಭೆಯು ಮೋಹಕತೆ ಯನ್ನು ಹುಟ್ಟಿಸುತಲಿತ್ತು. ಕೋಮಲವಾಗಿಹ ಚುಬತಾಗ್ರದ ಸುಳಿಯು, ಸಂಪಿಗೆಯ ಪೋಲ್ವ ಮೂಗಿನೆಸಳು, ರಸವೊಸರಿಸುವ ಚಿಗುರೆಲೆ ಬಣ್ಣದ ತುಟಿ ಇವೆಲ್ಲವೂ ಅದಕ್ಕೆ ಶೋಭೆಯನ್ನು ಇಕ್ಕುತ್ತಿ ದ್ದವು. ಶಂಖದಾಕೃತಿಯ ಕತ್ತು, ಢಮರಾಕೃತಿಯ ಕಟಿ, ಹಬ್ಬಿದೆದೆಯ ಬೆಡಗು, ನೀಳವಾದ ಬಾಹುಗಳು, ಕೆಂಪು ಕರತಲಗಳು, ರಸ್ಮಿಯನು ಗುವ ನಖಗಳು ಇವೆಲ್ಲವುಗಳು ಸಮರಸವಾಗಿ ಒಪ್ಪುತಿದ್ದವು. ಕೋಮಲತೆ ಕಾಠಿಣ್ಯತೆಗಳು, ಕಾರುಣ್ಯಕ್ರೌರ್ಯಗಳು, ಶಾಂತಿ ರೌದ್ರ ಗಳು ಆ ಮೂರ್ತಿಯ ಸೌಂದರ್ಯ ಕಳೆಗಳಾಗಿ ಕಂಗೊಳಿಸುತ್ತಿದ್ದವು. ಅಲ್ಲದೆ ಅದರ ತಲೆಯ ಮೇಲೆ ಮುತ್ತು ಮಾಣಿಕಗಳ ಮುಕುಟವು ಶೋಭಿಸುತಲಿತ್ತು. ತರತರದ ರನ್ನ ಮಣಿಗಳೇಸೋ ಆ ಮೂರ್ತಿಯ ಕೊರಳಿನಲ್ಲಿ ಕಂಗೊಳಿಸುತ್ತಿದ್ದವು. ಅಲ್ಲದೆ ಅದರ ಸುತ್ತಲೂ ಪ್ರಶಾಂತವಾದ ನಸುಬೆಳಗು ಹಬ್ಬಿಕೊಂಡದ್ದರಿಂದ ಯಾವುದೋ ಒಂದು ತೇಜವು ರೂಪುಗೊಂಡು ಬಂದಿದೆ ಎನಿಸುವುದು. ನೋಡಿ ದನು. ಅದನು ಆ ಕಿಶೋರನು ಬಗೆದುಂಬಿ ನೋಡಿದನು. ನೋಡಿ ತನ್ನ ಕಲ್ಪನಾಪಟದಲ್ಲಿ ಕಂಗೊಳಿಸುವ ಆ ಮೂರ್ತಿಯನ್ನು ಶಿಲೆ ಯಲ್ಲೇಕೆ ರೂಪಿಸಬಾರದು? ಎಂದನು. ಹೀಗೆಂದವನೆ ಬೆಣ್ಣೆಗಲ್ಲ ನ್ನೊಂದು ತಂದು ಅದರಲ್ಲಿ ಮೂರ್ತಿಯೊಂದು ಕಂಡರಿಸಹತ್ತಿದನು. ಶಿಲೆಯನೊಮ್ಮೆ ನೋಡುವನು. ಕಲ್ಪನಾಪಟದಲ್ಲಿರುವ ಚಿತ್ರವ ನೊಮ್ಮೆ ಪರಿಕಿಸುವನು. ಅದರ ರೇಖೆ ರೇಖೆಗಳನ್ನೆಲ್ಲ ಇದರಲ್ಲಿ ಅಚ್ಚ ಳಿಯದೆ ಅಂಕಿಸುವನು. ಅದೆಲ್ಲವು ಕಲ್ಪನಾಂಗಣದಿಂದ ಇಳಿದು ಶಿಲೆಯಲ್ಲಿ ಮೈದಾಳಿ ಬಿಟ್ಟಿತು. ಆಗ ಅವನು ಹಿಗ್ಗಿ ಕುಣಿದು ದಕ್ಕೇನು ಅಳವೆ!

ಆ ಕಿಶೋರನು ಈ ಮೂರ್ತಿಗೆ ಪೂಜೆ ಮಾಡುವನು. ನಮಿಸುವನು. ಹಿಗ್ಗುವನು. ವನವೆಲ್ಲ ತಿರುಗಿ ಏಸೇಸೊ ಝರಿಗಳ ನೀರು ತರುವನು. ಹೂಗಳನಾರಿಸುವನು. ಒಂದೊಂದು ಹೂವಿಗೆ ಸಾವಿರಸಲ,ಆತನನು ನೆನೆಯುವನು. ಆ ದೇವನಿಗೆ ನೀರು ನೆರೆದು ತಣಿಯುವನು. ಹೂವಿನಲಿ ಶೃಂಗರಿಸಿ ಕಣ್ತುಂಬಿ ನೋಡುವನು. ಮತ್ತೆ ಮತ್ತೆ ಹೂಗಳನೇರಿಸಿ ಮತ್ತೆ ಮತ್ತೆ ಶೃಂಗರಿಸಿ ನೋಡಿದಾಗೊಮ್ಮೆ ಹೊಸ ಹೊಸ ರೂಪುಗಳನ್ನದರಲ್ಲಿ ಕಂಡು ಸಂತಸಪಡುವನು. ಹೀಗೆ ದಿನವೊಂದರಲ್ಲಿ ಏಸೊ ಸಾರೆ ನೀರನೆರೆದು, ಗಂಧಲೇಪಿಸಿ, ಹೂವನಿಟ್ಟು ಮನದಣಿವನೊ ಎಣಿಕೆಯಿಲ್ಲ. "ನನ್ನಯ್ಯಾ! ನೀನೆನಗೆ ದೊರೆತು ನನ್ನ ಹೃದಯ ವೇದನೆಯನ್ನು ನೀಗಿಸಿದಿಯಾಲ್ಲಾ!" ಎಂದೆಂದು ಹೊಗಳಿದ್ದು ಎಣಿಕೆಯಿಲ್ಲ. ಕಟ್ಟಕಡೆಗೆ ಆತನ ಪಾದಗಳಲ್ಲಿ ಬಿದ್ದು "ನನ್ನಯ್ಯಾ! ರೂಪುದೋರಿ ತಣಿಸಿದ ನೀನು ಸೊಲ್ಲುಬೀರಿ ಇನ್ನೆಂದಿಗೆ ಸಂತವಿಸುವಿ? ನಿನ್ನ ದಂತದ ಕಿರಿಬೆಳಕಿನಿಂದ ನನ್ನ ಹೃದಯದ ಗಾಢಾಂಧಕಾರವು ಎಂದು ಅಡಗಿ ಹೋದೀತು? ನೀಡು, ನೀಡು, ನನ್ನಯ್ಯಾ! ನಿನ್ನ ವಾಣಿಯಮೃತವನ್ನು ನೀಡಿ ನನ್ನ ಈ ಹಾಲಾಹಲ ವಿಷವನ್ನು ಶಮನಮಾಡು" ಎಂದು ಬೇಡಿಕೊಳ್ಳುವನು. "ಎನ್ನ ಧೊರೆಯೇ! ನಿನ್ನೊಡನೆ ಮಾತಾಡದೆ ಇನ್ನೂ ಏಸು ವರುಷ ಜೀವಿಸಿರಲಿ? ನಾನು ಮಾಡಿದ ಈ ಪೂಜೆ ನಿನ್ನ ಗಮನೆಗೆ ಇನ್ನೂ ಬರಲೊಲ್ಲದೆ?? ಪನ್ನೀರನೆರೆಯುವುದರಲ್ಲೇನಾದರೂ ಕೊರತೆಮಾಡುತ್ತಿದ್ದೇನೆಯೆ? ಹೂ ಹುಡಿಯ ಲೇಪಿಸುವುದರಲ್ಲೇನಾದರೂ ಕೊಂಕಿದೆಯೇ?? ನಾನು ತರುವ ಈ ಹೂಗಳಲಿ ನಿನಗೆ ಮೆಚ್ಚುಗೆ ಇಲ್ಲವೆ??? ಹೇಳು ದೇವಾ! ಹೇಳು!! ನನ್ನಳಲಿಗೆ ನಿನ್ನ ಹೃದಯ ಇನ್ನೂ ಕರಗಿಲ್ಲವೆ? ಏಕೆ ಕರಗಿಸಲೊಲ್ಲಿ?? ಇನ್ನೂ ಕಣ್ಣೀರಗರೆಯೆನ್ನುವಿಯಾ?? ಈ ಸಪ್ತ ಸಮುದ್ರಗಳು ನನ್ನ ಕಣ್ಣೀರನಿಂದಲೇ ಉಪ್ಪಾಗಿರಬೇಕು ಧೊರೆಯೆ!" ಎಂದು ಅನ್ನುತ್ತ ಮತ್ತೆ ಬೇಡಿಕೊಳ್ಳುವನು. "ತಂದೆ! ತಂದೆ!!" ಎನ್ನುವನು. ಕೈಯಲ್ಲಿ ಹಿಡಿದ ನೀರ ಕಲಶ ಕೈಯಲ್ಲಿಯೇ ಹಿಡಿದು ಕಣ್ಣು ಮುಚ್ಚುವನು.

ಕಣ್ಣುಮುಚ್ಚಿ ನೆಲಕ್ಕುರುಳುವನು. ಗಳಿಗೆಯೊಂದು ಕಳೆದ ಮೇಲೆ ಮತ್ತೆ ಕಣ್ಣು ತೆರೆಯುವನು. ಕಣ್ಣು ತೆರೆದು ಹೂ ಹುಡಿಯ ಲೇಪಿಸುವನು. "ದೇವಾದಿದೇವಾ! ಎಂದು ನನಗೆ ಸಂತಸವಿಡುವಿ?" ಎಂದು ಮತ್ತೆ ಉರುಳುವನು. ಹೀಗೆ ನೆಲದಲ್ಲಿ ಉರುಳುವನೊಮ್ಮೆ, ಏಳುವನೊಮ್ಮೆ. ಎದ್ದು ಪರಾಗವನ್ನು ಚಿಮುಕಿಸುವನೊಮ್ಮೆ. ಮತ್ತೆ ಉರುಳುವನು. ಉರುಳುರುಳಿ ಅಳುವನು. ಅತ್ತತ್ತು ಏಳುವನು. ಎದ್ದು ಹೂವ ಮುಡಿಸುವನು. ಹೂವ ಮುಡಿಸಿ "ತಂದೆ! ನನ್ನಯ್ಯಾ!! ಎಂದು ನನ್ನೊಡನೆ ಮಾತಾಡುವಿ?" ಎಂದು ಶೋಕಿಸುವನು. ಮತ್ತೆ ಮತ್ತೆ ಬಹು ಬಗೆಯಿಂದ ಪೂಜಿಸುವನು. ಪೂಜೆಗಳೆಲ್ಲ ಮುಗಿದ ಮೇಲೆ "ತಾತಾ! ನನ್ನ ಹಡೆದ ತಂದೆ!! ಎನ್ನಯ್ಯಾ!!! ಎನ್ನೊಡೆಯಾ! ನನ್ನ ಪಡೆದ ಕರುಳಿನ ಕರಳೆ!!! ನಿನಗೆ ಕರುಣೆ ಬಾರದೆ? ನಿನ್ನ ಕರುಳನ್ನು ಇಷ್ಟು ಕಟುಕಾಗಿ ಮಾಡಿಕೊಂಡು ಹೀಗೇಕೆ ಕೂತಿರುವಿ?? ನನ್ನಯ್ಯಾ! ನನ್ನನ್ನು ಸೃಷ್ಟಿಸಿ ಇಂಥ ದಿಕ್ಕುಗೇಡಿಯಾಗಿ ಮಾಡಿ ಮಾತಾಡದೆ ಇರಬಹುದೆ? ನೀನು ಕರುಣಾಳು ಅಲ್ಲವೆ?? ನಿನಗೆ ಕರುಣೆ ಬರುವುದಿಲ್ಲವೆ??? ಕಮರಿ ಹಾರುವ ಸಿದ್ಧರಾಮನನ್ನು ಕೈ ಹಿಡಿದು ಮಾತನಾಡಿಸಿದಿಯಂತೆ, ಬಳಲುವ ಬಸವನನ್ನು ರಮ್ಮಿಸಿದಿಯಂತೆ, ಅಳುವ ಅಕ್ಕಮಹಾದೇವಿಗೆ ಒಲಿದಿಯಂತೆ ಎನ್ನನೇಕೆ ನೂಕುವಿ ತಂದೆ? ನನ್ನ ಳಲಕೇಳಿ ಓಗೊಡದಿರುವಿಯಾ?? ಮಾತಾಡು, ಮಾತಾಡು. ಮಾತಾಡಿ ಎನ್ನ ರಕ್ಷಿಸು ತಂದೆ!" ಎಂದು ಕಳವಳಿಸಿ ಕಾತರಿಸುವನು. ಮತ್ತೊಮ್ಮೆ "ನನ್ನಪ್ಪಾ! ನಿನಗೆ ಹಸಿವೆಯಾಗಿದೆಯೆ? ಹಣ್ಣು ತಂದು ಕೊಡಲಿಯಾ?? ಹೂಗಳೇನಾದರೂ ನಿನ್ನ ಲೀಲೆಗೆ ಬೇಕೆ???" ಎಂದು ಕೇಳುವನು. "ಕೊಡು ಎನ್ನುವಿಯಾ? ತರಲಿ??" ಎಂದು ಅನ್ನುತ್ತ ಫಲ ಪುಷ್ಪಗಳಿಗಾಗಿ ಬನಕ್ಕೆ ಹೋಗುವನು. ಅಲ್ಲೆಲ್ಲ ತಿರುಗಿ ಸಿಹಿಸಿಹಿಯಾದ ಹಣ್ಣುಗಳನ್ನೂ, ಚೆಲುವಾದ ಹೂಗಳನ್ನೂ ಆರಿಸುವನು. ಅಷ್ಟರಲ್ಲಿಯೇ "ನನ್ನಯ್ಯನೊಬ್ಬನೇ ಅಲ್ಲಿ ಉಳಿದಿದ್ದಾನೆ. ಇಲ್ಲೆಲ್ಲಾ ಕಾಡುಮೃಗಗಳು ವಿಹರಿಸುತ್ತವೆ. ಎಲ್ಲಿಯಾದರೂ ಅವನ ದೇಹಕ್ಕೆ ಘಾಸಿಮಾಡಿಯಾವು" ಎಂದನ್ನುತ್ತ

ಓಡಿ ಬರುವನು. ಓಡಿ ಬಂದು ಆ ಮೂರ್ತಿಗೆ ಬಿಗಿದಪ್ಪುವನು. ತುಟಿ ಹಿಡಿದು ಮಾತನಾಡಿಸುವನು. ಆತನ ಕೈಹಿಡಿದು ಗೆಳೆಯನಂತೆ ನಲಿನಲಿದು ಕುಣಿಯುವನು. ಆ ದೇವನ ಹೆಗಲಮೇಲೆ ಕೈಯನಿಟ್ಟು ಮೊಗವ ನೋಡುವನು. 'ಬನಗಳಲಿ ವಿಹರಿಸಲು ನಡೆ' ಎನ್ನುವನು. ಅನಿತರೊಳೆ ಕರಾಳ ಕಾತರತೆಯು ಮತ್ತೆ ಅವನಿಗೆ ಬಂದು ಕೂಡಿಕೊಳ್ಳುವುದು. ಆಗ ಆತನಿಗೆ ಮೊದಲಿನ ಗೋಳು ಕಟ್ಟಿಟ್ಟದ್ದು.

೫

ಬಳಿಕ ಕೆಲಕಾಲದ ಮೇಲೆ ಆ ಕಿಶೋರನ ಬಣ್ಣ ಬಣ್ಣದ ಭಾವಗಳ ಬಸುರಿನಿಂದ ಬೇರೊಂದು ದಿವ್ಯಭಾವವು ಅವತರಿಸಿದೆ. ಇದೀಗ ಆತನು ಆ ದೇವರಾಯನ ನಲ್ಲೆಯಾಗಿದ್ದಾನಲ್ಲದೆ, ಆ ದೇವನನ್ನು ತನ್ನ ನಲುಮೆಯ ನಲ್ಲನನ್ನಾಗಿ ಮಾಡಿಕೊಂಡಿದ್ದಾನೆ. ಚೆಲುವಾದ ಹೆಣ್ಣಾಗಿ ಬೈಗು ಬೆಳಗೆಲ್ಲಾ ತನ್ನನ್ನು ಶೃಂಗರಿಸಿಕೊಳ್ಳುವುದರಲ್ಲಿಯೇ ಕಾಲವನ್ನು ಕಳೆಯುತ್ತಿದ್ದಾನೆ. ಮುದ್ದಾದ ಹೂಗಳನ್ನು ಹೆಣೆದು ಪತ್ತಲವನುಡುವನು. ಮೃದುವಾದ ತಳಿರುಗಳ ಕುಪ್ಪಸವ ತೊಡುವನು. ತಿಳಿನೀರ ಕೊಳದಲ್ಲಿ ಪಡಿನೆಳಲನೋಡಿ ಕುರುಳ ಸರಿಪಡಿಸುವನು. ಮರುಕ್ಷಣದಲ್ಲಿ ಇದು ತನ್ನ ನಲ್ಲ ಚಲುವಿಕೆಗೆ ಸರಿಬಾರದೆಂದು ವೇಷವೆಲ್ಲವನು ತೆಗೆದಿರಿಸಿ ಹೊಸ ವೇಷವನ್ನು ಧರಿಸಿಕೊಳ್ಳುವನು.

ಹೀಗೆ ಬೆಡಗಿನ ವೇಷವೊಂದನ್ನು ಧರಿಸಿಕೊಂಡು "ನನ್ನ ಪ್ರಿಯನೆ! ಇಂದು ನಿನ್ನ ಒಪ್ಪಿಗೆಯಾದ ಉಡುಪು ನನ್ನದಾಗಿದೆಯೇ? ಮಾತಾಡುವಿಯಾ?? ಕೈ ಹಿಡಿದು ಕರೆಯುವಿಯಾ???" ಎಂದು ಅನ್ನುತ್ತಾ ಆ ಮೂರ್ತಿಯ ಮುಖವನ್ನು ನೋಡುವನು. ನೋಡಿ ನಲಿಯುವನು. ನಲಿನಲಿದು ಪೊರೆಯೇರುವನು. ಇಂತು ಕಳೆದ ಮಧುರ ದಿನಗಳಿಗೆ ಲೆಕ್ಕವಿಲ್ಲ.

ಇಂತು ಕೆಲಕಾಲ ಕಳೆದ ಬಳಿಕೊಂದು ದಿನ ಕಿಶೋರನು ಹೆಣ್ಣುಡುಗೆ ಹೊತ್ತು ತನ್ನ ನಲ್ಲನ ಸಿರಿಮೊಗವ ನಿರುಕಿಸುತಿರಲು ಆ ಶಿಲಾಮಯ ಮೂರ್ತಿಯ ಮೊಗದಲ್ಲಿ ಮುನ್ನಿನ ಬೆಡಗಿಲ್ಲ. ಮುನ್ನಿನ ಕಳೆಯಿಲ್ಲ. ಮುನ್ನಿನ ಸಿರಿ ಸೊಬಗಿಲ್ಲ. ಶಿಲೆಯಿಂದು ಬರೇ ಶಿಲೆ ಯಾಗಿ ನಿಂತಿದೆ. ಆಗಿನ ಅವನ ಭಾವೋದ್ರೇಕಗಳ ತಾಕಲಾಟಕ್ಕೆ ಮಿತಿಯಿಲ್ಲ. ಆ ತಾಕಲಾಟದ ರೌದ್ರಾಕಾರದ ತೆರೆಗಳಿಗೆ ಆತನುರು ಳುರುಳಿ ಬೀಳುವನು. ಆಹಾ! ಎಂಥ ಭಾವಗಳು! ಏನು ಕೋಲಾ ಹಲ!! ಸೀರಿಯನ್ನುಟ್ಟು "ಎನ್ನರಸ! ಎನ್ನನಲ್ಲ!! ಹೃದಯೇಶ!!!" ಎಂದೆಂದು ಬಾಯ್ಬಿಡುತ್ತ ಬನವೆಲ್ಲ ತಿರುಗುತ್ತಿದ್ದುದು ನೆನಸಿಕೊಂಡರೆ ಆ ಚಿತ್ರ ನಮ್ಮ ಕಣ್ಣೆದಿರು ಕಟ್ಟದಿರದು. "ಎನ್ನ ಬಗೆಯರಸಾ! ಎನ್ನ ನೇಕೆ ಬಿಟ್ಟುಹೋದಿ? ನಿನಗಾಗಿ ಇನ್ನೂ ಎಷ್ಟು ಕಾಲ ಕಾದು ನಿಂತಿ ರಬೇಕು?? ನೋಡು! ನಿನ್ನ ನಲ್ಮೆಯ ನಲ್ಲೆ ನಿನಗಾಗಿ ಸಿಂಗರಿಸಿ ಕೊಂಡು ಎಷ್ಟು ಔರಣವಾಗಿ ಬಂದಿದ್ದಾಳೆ. ಅವಳ ಮುಖದ ಕಡೆ ಗಾದರೂ ಒಮ್ಮೆ ನೋಡು. ನನ್ನ ರೂಪು ನಿನಗೊಪ್ಪದಿದ್ದರೆ ಬಿಟ್ಟು ಬಿಡುವೆಯಂತೆ. ಆದರೆ ಹೃದಯೇಶಾ! ನಿನ್ನ ಕಡೆಗಣ್ಣಿನಿಂದಾದರೂ ನನ್ನ ರೂಪನ್ನು ನೋಡಿ ಬಿಟ್ಟುಬಿಡಬಾರದೆ. ನೋಡು! ನೀಳವಾದ ಕೂದಲುಗಳನ್ನು ಪರಿಪರಿಯಾಗಿ ಹೆಣೆದುಕೊಂಡು ಅಲಲ್ಲಿ ದುಂಡು ದುಂಡನ್ನ ಹೂವನಿಟ್ಟು ಬೆನ್ನಿನ ಮೇಲೆ ತೂಗಬಿಟ್ಟಿದ್ದೇನೆ. ಆ ಬೆಡಗು ನಿನಗೆ ಬೇಜಾರವೇ? ನಯವಾದ ನೀಲ ಹೆಳಲಿನ ಮೇಲೆ ಹೊಚ್ಚಿರುವ ತಿಳುವಾದ ಸೆರಗಿನಲ್ಲಿ ಅದು ಹೇಗೆ ಇಣಿಕ ಇಕ್ಕುತ್ತಿದೆ ನೋಡು. ಇದು ನಿನಗೆ ಮೋಹಕವಲ್ಲವೇ? ಹಾಗಾದರೆ ಪ್ರಿಯನೇ ನನ್ನ ಬಿಟ್ಟು ಏಕೆ ಹೋದಿ?? ನನ್ನ ರೂಪು ನಿನಗೆ ಒಪ್ಪಿಗೆಯಿಲ್ಲವೇ??? ನನ್ನರಸಾ ಬಾ! ನನ್ನ ಪ್ರಿಯನೇ ಬಾ!! ನನ್ನೊಡೆಯಾ ಬಾ!!! ಬಂದು ಬೇಗನೇ ನನ್ನನ್ನು ಬಿಗಿದಪ್ಪು. ಪ್ರೇಮುಜ್ವಾಲೆಯಲ್ಲಿ ಮಡಿಯಲಿ ರುವ ನನ್ನನ್ನು ಉಳಿಸಿಕೋ· ಹೃದಯದರಸಾ! ಗೋಕುಲದ ಗೋಪಿ ಯರು ನಿನ್ನ ನೆನೆದಾಗಲೆಲ್ಲ ಅವರ ಕಾಣುತ್ತಿದ್ದೆಯಂತೆ. ಕಂಡು ಅವರನ್ನು ರಮಿಸುತ್ತಿದ್ದಿಯಂತೆ. ನನ್ನನೇಕೆ ರಮಿಸಲೊಲ್ಲಿ? ನಾ

ಮಾಡಿದಪರಾಧವೇನುಂಟು?? ನಿನ್ನ ಲೋಕ ಸೃಜಿಸುವ ಕೆಲಸವು ನಿನಗೆ ಹಿರಿಯದಾಗಿರಬೇಕು. ಅದರ ದುಡುಮೆಯಲ್ಲಿ ವಿಲಂಬವಾಗುತ್ತಿರಲೂ ಬಹುದು. ಆದರೆ ನನ್ನರಸಾ ನಿನ್ನ ಕೂಡುವ ಹಂಬಲ ಅದಕ್ಕೂ ಹೆಚ್ಚಾಗಿದೆ ನನಗೆ. ಹೇಗೆ ಮಾಡಲಿ?'' ಎಂದನ್ನುತ್ತ ಬಡಬಡಿಸು ವನು. ಎಷ್ಟು ತಳಮಳಿಸಿದರೂ ಮೊದಲಿನ ಆ ತೇಜ, ಆ ರೂಪು ಬಾರದಿರಲು "ಎಲ್ಲಿ ಹೋಯಿತು ?'' ಎಂದು ಹುಡುಕತೊಡಗುವನು. ಕಂಡಕಂಡವರಿಗೆ ಕೇಳುವನು. "ಎಲೆ ತರುಮರಾದಿಗಳೇ! ವೃಕ್ಷಂ ಗಳೇ!! ನನ್ನ ನಲ್ಲನೆಲ್ಲಿಹನು ನೋಡಿರುವಿರೇನೆ?? ಆತನಿಲ್ಲಿ ಬಂದಿರ ಲಿಲ್ಲವೇ?? ಇದೇ ಮಾರ್ಗವಿಡಿದು ಹೋಗಲಿಲ್ಲವೇ??? ಆತನನ್ನು ನೋಡಲಿಲ್ಲವೇ ನೀವು???? ಇದೇ ಪಥವಿಡಿದು ಹೋಗಿದ್ದರೆ ಹೇಳಿರಿ, ಈಗಲೇ ಹೋಗಿ ಆತನನು ಅಡ್ಡಗಟ್ಟಿ ಕರತರುವೆನು. ಏನು ಹೇಳು ವಿರಿ? ನೋಡಿಲ್ಲವೆಂದು ಹೇಳುವಿರಾ?? ನೋಡಿದ್ದರೂ ಹೀಳುವುದಿಲ್ಲ ವೆನುವಿರೋ ??? ಏನನ್ನುವಿರಿ???? ಕೂಗುವ ಎಲೆ ಕೋಗಿಲೆಯೇ! ತಡೆ ತಡೆ, ತಡೆದಿಷ್ಟು ನನ್ನ ಮಾತನಾಲಿಸು. ನನ್ನರಸ ಇಲ್ಲಿ ಬಂದಿ ದ್ದನೇ? ಬಂದಿದ್ದರೂ ನೀನು ಹೇಳಲಾರೆಯಾ?? ಎಲೆ ಚಾಣಾಕ್ಷಿ! ಚಾಣಕ್ಕಿ ನೀನು ಬಲು ಜಾಣಲು. ನನ್ನ ನಲ್ಲನನು ಬಲ್ಲಪರಿಯೆಲ್ಲ ವನು ಕತೆಮಾಡಿ ಹೇಳುವವಳು ನೀನು. ಹೇಳು ಅಮ್ಮಾ! ಹೇಳು. ನನ್ನೊಡೆಯನತ್ತ ಹೋದನು ಹೇಳು. ಆತನೊಬ್ಬನೇ ಹೋದನೇ? ಜೊತೆಗೆ ಹೆಂಗಳೆಯರಾರಾದರೂ ಇದ್ದರೆ?? ಯಾರಿದ್ದರು??? ಏನನ್ನು ಟ್ಟುಕೊಂಡಿದ್ದರು? ಹೊದೆದ ವಸ್ತ್ರವದಾವುದು?? ಪೀತಾಂಬರವ ನ್ನುಟ್ಟಿದ್ದರೆ? ಮುತ್ತುಗಳ ಧರಿಸಿದ್ದರೆ?? ಹೊನ್ನದೊಡವುಗಳನ್ನು ತೊಟ್ಟಿದ್ದರೆ??? ಝೇಂಕರಿಪ ಎಲೆ ಭೃಂಗಾವಳಿಗಳೇ; ನಿಮ್ಮ ಝೇಂಕ ರದ ರವಕ್ಕೆ ಈ ವಿರಹಣಿಯ ವಿರಹ ಪ್ರಜ್ವಲಿಸುತ್ತಲಿದೆ. ತಡೆಯಿರಿ. ತಡೆಯಿರಿ. ತಡೆದು ನನ್ನ ನಲ್ಲನ ಕುರುಹ ಹೇಳಿರಿ; ಕುರುಹನು ಹೇಳಿ ಮುಂದಿನರಲಿಗೆ ನಿಮ್ಮಡಿಯನಿಡಿರಿ. ಇಲ್ಲದಿರೆ ಈ ವಿರಹಣಿ ಯರ ಶಾಪದಲಿ ಸುಟ್ಟು ಕರಿಗೊಳ್ಳುವಿರಿ. ಎಲೆ ತಂಬೆಲರೆ! ಏಕೆ ಬೀಡುತಿರುವಿ? ನಿನ್ನ ಮೈ ಸೋಂಕಿನಿಂದ ವಿರಹಿಣಿಯ ವಿರಹದಾಹ

ಪ್ರಜ್ವಲಿಸುವುದೆಂಬುದನ್ನು ಮರೆತೆಯಾ? ನಿಲ್ಲು ನಿಲ್ಲು. ಅದೋ ದೂರದಲಿ ನಿಂತು ನನ್ನೊಡನೆ ಎರಡು ಮಾತುಗಳನಾಡು. ಅಣ್ಣಾ! ನನ್ನ ಗಾಳಿಯಣ್ಣಾ!! ನಾಡೆಲ್ಲವನು ಸುತ್ತಿ ನೀನಿದೇ ಬಂದೆಯಲ್ಲವೇ? ನನ್ನ ಚೆನ್ನಿಗರಾಯನನ್ನು ನೀನೆಲ್ಲಿಯಾದರೂ ಕಂಡೆಯಾ?? ಕಂಡಿಲ್ಲವೇ? ಕಂಡಿಲ್ಲವೇ?? ಹೇಳು ಅಣ್ಣಾ! ಹೇಳು. ನನ್ನ ಹೃದಯ ತಾಪ ನೀನು ಶಮನಿಸದೆ ಮತ್ತಾರು ಶಮನಿಸಬೇಕು? ಅಯ್ಯೋ ಅಯ್ಯೋ! ಯಾರೂ ಹೇಳಲೊಲ್ಲರಲ್ಲಾ!! ನಾನುಮಾಡಿದ ಪಾಪವೇನು!.... ಎಲೆ ಮಾಮರವೇ! ಎಲೆ ಕೋಗಿಲೆಯೇ!! ಮದಾಳಿಗಳೇ!!! ನನ್ನ ಮೂರು ತನೇ!!!! ನಿಮೆಲ್ಲರಿಗೂ ಹಿಂದೊಮ್ಮೆ ಅಕ್ಕ ಮಹಾದೇವಿ ಕೇಳಿದಾಗ ಆ ದೇವನನಕುರುಹ ಹೇಳಿಕೊಟ್ಟಿರಿ. ಈಗ ನನಗೇಕೆ ಅರುಹಲೊಲ್ಲಿರಿ? ಅಂಥ ಅಪಾರವಾದ ಅಪರಾಧ ನನ್ನದೇನಿರುವುದು? ಹೇಳಿರೇ ಹೇಳಿರಿ. ನಿಮಗೆ ಸೆರಗೊಡ್ಡಿ ಬೇಡಿಕೊಳ್ಳುವೆನು ಹೇಳಿರಿ. ಹೇಳಿ ನನ್ನನ್ನು ಉಳುಹಿಕೊಳ್ಳಿರಿ." ಎಂದು ಅನ್ನುತ್ತಿರುವಷ್ಟರಲ್ಲಿ ನೆಲದೆಡೆ ದೃಷ್ಟಿ ಹೋಗುವುದು. "ಈ ಕಿರಿ ಹಸರು ಹುಲ್ಲಿನ ಮೇಲೆ ಇವು ಏನು ಸುರಿದಿಹವು?.... ನೀರ್ಪನಿಗಳೆ?.... ಅಲ್ಲ. ಅಂದರೆ ಮತ್ತೇನು?....ಮುತ್ತು! ನನ್ನ ಚೆನ್ನಿಗನ ಮುತ್ತುಗಳಿವು. ಆತನ ಕೊರಳ ಸರ ಹರಿದು ಇಲ್ಲೆಲ್ಲಾ ಚೆಲ್ಲಿಹವು ... ಇವು ಏನು?.... ಸಿಂಪುಗಳು ... ಅಯ್ಯೋ! ನನ್ನನಲ್ಲ ಇಲ್ಲಿ ಹಾದು ಹೋಗುವಾಗ ಕಲ್ಲುಹರಳುಗಳೆಲ್ಲ ಕಣ್ಣುಬಿಟ್ಟು ನೋಡಿವೆ.... ಇವು ಏನು?.... ನೆಲಕ್ಕೆ ಹಬ್ಬಿದ ಬಣ್ಣ ಬಣ್ಣದ ಹೂಗಳು. ನನ್ನ ಚೆಲುವ ಚೆನ್ನಿಗನ ಪಾದ ಸಂದರ್ಶನದ ಹಿಗ್ಗಿನಲಿ ಭೂಶಾಯಿಯು ಬಗೆ ಹರುಷನಗೆ ನಗುತ್ತಲಿವೆ." ಎಂದನ್ನುವನು. "ತೆರಳಿಹನು. ನನ್ನರಸ ಇದೇ ಮಾರ್ಗವಿಡಿದು ತೆರಳಿಹನು." ಎಂದು ಮತ್ತೆ ಅನ್ನುತ್ತಾ ಮೇಲೆ ಮುಖಮಾಡುವನು. ಅಲ್ಲಿ ಅಲೆದಾಡುವ ಮಾಮರದ ಚಿಗುರೆಲೆಗಳನ್ನು ಕಂಡು "ಎಲೆ ಮಾಮರವೇ! ನನ್ನಿನಿಯ ಇಲ್ಲಿ ಹಾದು ಹೋಗುವಾಗ ಎನ್ನ ಸಂದರ್ಶಿಸದೆ ಹೋಗಬೇಡವೆಂದು ಆತನಿಗೆ ಅಡ್ಡಗಟ್ಟಿದಿಯಾ? ಅದಕಾಗಿ ಆತನು ತನ್ನ ರಸಗೈಗಳಿಂದ ನಿನ್ನನ್ನು ಸರಿಸಿ ಓರೆಮಾಡಿದನೇ? ಆತನ ಆ ಮೃದು ಸ್ಪರ್ಶನದಿಂದ ನಿನಗೀ

ಕೋಮಲತೆಯುಂಟಾಗಿದೆಯೇ?? ಧನ್ಯಳವ್ಮಾ! ನೀನುಧನ್ಯಳು!! ನಿನ ಗೆನ್ನ ಅನಂತ ಪ್ರಣಾಮವಿರಲಿ.'' ಎಂದನ್ನುತ್ತ ಮತ್ತೊಂವೆಡೆ ಹೋಗುವನು. ಅಲ್ಲಿ ಬಳಕುವ ಬಳ್ಳಿಯೊಂದು ಮರವನಪ್ಪಿ ಸಂಗಸುಖದ ಸಾಗರದಲ್ಲಿ ಈಜುತಿರುವುದು ಕಂಡು ''ಎಲೆಗೆಳದಿ! ಸಂಗಿಯನಗಲಿ ಭಂಗಬಡುತಿರುವ ನನ್ನನು ಎನ್ನಿನಿಯನ ಸೇರಿ ಸುಖಿಸುವಂತೆ ಹರಸೆನ್ನ ತಾಯೆ!'' ಎಂದು ಕಳವಳಿಸಿ ಅದರ ಅಡಿಗೆರಗುವನು. ಇಂತು ಕಂಡ ತರುಗಳಿಗೆ, ಕಂಡ ಮರಗಳಿಗೆ, ಹೂಗಳಿಗೆ, ಹಕ್ಕಿಗಳಿಗೆ ಮೊರೆಯಿಟ್ಟು ಹಾರೈಸಿ, ಹಲುಬಿ ಹಲುಬಿ ಬನದಲೆಲ್ಲಾ ಅಲೆಯುತಿಹನು.

೬

ವನಜಲಗಳೆಷ್ಟೂ ಅಲಗದೆ ಸೃಷ್ಟಿಶಾಂತವಾಗಿಹುದು. ಮಿಸುಕಲಾರದ ಗಾಳಿ ತನಿವಣ್ಣಗಳಿಂದ ಅತಿ ಭಾರವಾಗಿಹ ಅದರ ಕೊಂಬೆಗಳ ಸರಿಸಿ ಬರುತಿದ್ದರೂ ಎಷ್ಟೂ ಸದ್ದು ಮಾಡುತ್ತಿರಲಿಲ್ಲ. ಇದೀಗ ಇರುಳ ಕಡೆ ಝಾವದ ಕೊನೆಯ ನಿಮಿಷ. ಪೂರ್ವಾಚಲೆಯ ಮೋರೆ ಕೆಂಪೇರಿ ನಿಂತುಕೊಂಡಿವೆ. ಕುಸುಮ ಕಾಂತೆಯರ ಸೌರಭವು ವನವೆಲ್ಲ ಸುಳಿದು ಎಲ್ಲರನು ಎಳೆಯುತಿಹುದು.

'' ಅನಂತ! ಅನಂತ!! ಅಪಾರವಾಗಿಹ ಅನಂತ!!! ನಿನ್ನಂತರಂಗದಲ್ಲಿ ಅನಂತಕೋಟಿ ಗೋಲಂಗಳೆಲ್ಲ ಅಣುಗಳಾಗಿ ವಿಹರಿಸುತ್ತಿಹವಲ್ಲ!!!! ಓಂ ಭಗವಾನ್ ಓಂ ಭಗವಾನ್!!'' ಎಂದು ಗಿಡದಡಿಯೊಂದರಲಿ ನಯನಗಳ ಮುಚ್ಚಿ ಕುಳಿತ ಆ ಕಿಶೋರನ ಮುಖದಿಂದ ಗಭೀರವಾದ ಮಾತುಗಳೇಳತೊಡಗಿವೆ. ಆತನ ಮುಖಮುದ್ರೆಯಲ್ಲಿ ಒಂದು ಸ್ಥೈರ್ಯವಿದೆ. ಒಂದು ಧೈರ್ಯವಿದೆ. ಏನನೋ ಕಂಡ ಹಿಗ್ಗು ವೈಯನ್ನಲುಗಿಸಿ ಮುಖಕ್ಕೆ ಕಾಂತಿಯನಿಕ್ಕುತ್ತಿದೆ. ಹಿಗ್ಗು ಹೆಚ್ಚಾದಾಗಲೊಮ್ಮೊಮ್ಮೆ ''ಅನಂತಕೋಟಿ ಗೋಲಂಗಳೆಲ್ಲ ನನ್ನಯ್ಯಾ, ನಿನ್ನಂಗದಲ್ಲಿ ಅಣುಗಳಾಗಿ ವಿಹರಿಸುತ್ತಿಹವಲ್ಲ!'' ಎಂದಂದು ಮತ್ತೆ ಮತ್ತೆ

ಉದ್ಗಾರ ತೆಗೆಯುವನು. ಆತನ ರೋಮರೋಮಗಳಲೆಲ್ಲ ಆನಂದ ಲಹರಿಗಳು ಶೀಲಿಬಂದು ಹೊರಚೆಲ್ಲುತಿಹವು.

ಈಗ ಆ ಕಿಶೋರನಿಗೆ ಎಲ್ಲೆಲ್ಲಿಯೂ ದೇವನ ಸಾನಿಧ್ಯ ಘನಕ್ಕೆ ಘನನಾಗಿ ಆ ಅಖಂಡ ಸ್ವಯಂಭು ಮೂರ್ತಿಯು ಆತನಿದುರಿನಲ್ಲಿ ನಿಂತುಕೊಂಡಿಹನು. ಅದನ್ನು ನೋಡಿ "ಅನಂತಾ! ಅನಂತಾ ಅಂತವಿಲ್ಲದ ಪರಮನೆ!!! ಏನು ನಿನ್ನ ರೂಪು! ಏನು ನಿನ್ನ ತೇಜ!! ನಿನ್ನಂಗದ ರಕ್ತದಣುಗಳಾಗಿ ಸೂರ್ಯಗೋಲಗಳೇಸು ಸುತ್ತುತಿಹವು! ನಕ್ಷತ್ರಗಳೇಸು ಆಡುತಿವೆ!! ಚಂದ್ರಮಗಳೇಸು ಮೂಡಿ ಮೂಡಿ ಮುಳುಗುತಿಹವು. ಆಹಾ! ಏನು ರೂಪು!! ಏನು ಅಂಗ!!! ನನ್ನ ದಿಟ್ಟಿ ಮುಗಿಯುದ ಆಚೆ, ನನ್ನದೊಂದೇ ಏಕೆ ನನ್ನಂಥ ಅನಂತ ದೃಷ್ಟಿಗಳು ಮುಗಿಯುದ ಆಚೆಯಲ್ಲಿಯೂ ನಿನ್ನಂಗ ತೋರುತಿಹುದಲ್ಲ!!! ನಿನ್ನ ಕಣ್ಣುಗಳೇಸು ! ಕಿವಿಗಳೇಸು !! ಅಂಗಾಂಗಳೇಸು !!! ಎಣಿಕೆ ಇವೆಯೆ? ಮುಟ್ಟಿದಲ್ಲೆಲ್ಲ ಕಿವಿಗಳು. ಮುಟ್ಟಿದಲ್ಲೆಲ್ಲ ಕಣ್ಣು. ಮುಟ್ಟಿದಲ್ಲೆಲ್ಲ ಸರ್ವಾಂಗಗಳು. ನಿನ್ನಂಗದ ಪರಮಾಣುವಿನ ಅಬ್ಜಾಂಶ ಭಾಗಗಳಲಿ ಕೋಟಿಗಟ್ಟಲೆ ಕಣ್ಣು ಕಿವಿಗಳಿವೆ. ಹಸ್ತ ಪಾದಗಳಿವೆ. ಸ್ಥಲವಿರುವಡೆಲ್ಲೆಲ್ಲಾ ನಿನ್ನ ಸರ್ವ ಶಕ್ತಿಗಳು ಸದಾ ಜಾಗ್ರತವಾಗಿ ಕಾರ್ಯವನೆಸಗುತಿಹವಲ್ಲಾ ! ಆಹಾ ! ಯಾವ ನಿನ್ನ ರೂಪಿನ ಪರಿಯು ಬೆಡಗವಿದು ದೇವಾ !!

ಓಂ ಭಗವಾನ್! ಅನಂತಕೋಟಿ ಸೂರ್ಯಚಂದ್ರರು, ಅನಂತಕೋಟಿ ನಕ್ಷತ್ರಗಳು, ಅನಂತಕೋಟಿ ಪೃಥ್ವಿಗಳು ಶಿವನಂಗದಣುಗಳಾಗಿ ಸಂಚರಿಸುತ್ತಿಹವಲ್ಲ! ಇಂಥ ಅನಂತಕೋಟಿ ಶಿವರು ಮತ್ತೊಂದು ಗೋಲದಲಿ ಜೀವಿಸುತಿಹರು. ಅನಂತಕೋಟಿ ಶಿವರನು ಹೊತ್ತುಕೊಂಡ ಇಂಥ ಅನಂತಕೋಟಿ ಗೋಲಂಗಳು ಪರಶಿವನ ಲಿಂಗದಲ್ಲಿ ಅಣುಗಳಾಗಿಹವು. ಇಂಥ ಅಣುಗಳನು ಹೊತ್ತುಕೊಂಡ ಪರಶಿವರೇಸೋ ಮತ್ತೊಂದು ಗೋಲಧಲಿ ಜೀವಿಸಿಹರು, ಇಂಥ ಪರಶಿವರನ್ನು

ಹೊತ್ತುಕೊಂಡ ಅಸಂಖ್ಯ ಗೋಲಂಗಳು ಪರಾತ್ಪರ ಶಿವನಲ್ಲಿ ಅಣು ಗಳಾಗಿಹವು. ಹೀಗೆ ಶಿವ, ಪರಶಿವ, ಪರಾತ್ಪರ ಶಿವರೆನಿಸಿಕೊಂಡ ಗಣನಾತೀತ ಶಿವರುಗಳು ಓಂ ಭಗವಾನ್ ! ನಿನ್ನಂಗದಲ್ಲಿ ಜೀವಿಸಿ ಹರು. ಭಗವಾನ್ ! ಇನ್ನು ನಿನ್ನ ಅನಂತ ಸೂಕ್ಷ್ಮತೆಯನೇನು ಬಣ್ಣಿಸಲಿ? ಶಿವನಂಗದ ಅಣುಗಳಾಗಿ ಬಾಳುತಿರುವ ಅನಂತಕೋಟಿ ಗೋಲಂಗಳಲ್ಲಿ ಅನಂತಕೋಟಿ ಜೀವರುಗಳು ಜೀವಿಸಿಹರಷ್ಟೆ? ಆ ಜೀವರುಗಳಲ್ಲಿ ನನ್ನನೂ ನಾನು ಕಾಣುತಿರುವೆ. ನನ್ನ ದೇಹದಲ್ಲಿ ಮಹಾ ಗೋಲಂಗಳಂತೆ ಅನಂತಕೋಟಿ ಅಣುಗಳು ವಿಹರಿಸು ವುದನ್ನು ಕಾಣುತಿರುವೆನು. ಅವುಗಳೊಂದೊಂದರಲ್ಲಿ ಅನಂತಕೋಟಿ ಜೀವಗಳು ಜೀವಿಸಿವೆ. ಆ ಜೀವರುಗಳ ಅನಂತಕೋಟಿ ಅಣುಗಳಲ್ಲಿ ಅನಂತಕೋಟಿ ಜೀವಗಳು ವಾಸಿಸುತ್ತಿವೆಯೆಂಬುದನು ಸಂದರ್ಶಿಸು ತಿರುವೆ. ಇಂಥ ಅನಂತಕೋಟಿ ಸೂಕ್ಷ್ಮದ ಪರಮಾಣುವಿನ ಅಬ್ಜಾಂಶ ಭಾಗದ ಕೇಂದ್ರಗಳಲೆಲ್ಲ ಓಂ ಭಗವಾನ್ ! ಅಂದು ಆ ಕಲ್ಪನಾಪಟದಲ್ಲಿ ಕಂಡ ಆ ನಯನ-ಮನೋಹರವಾದ ನಿನ್ನ ಮೂರ್ತಿ ಮಂದಸ್ಮಿತದಿಂದ ಮಂಡಿಸಿರುವುದನ್ನು ಕಣ್ತುಂಬ ಕಾಣುತಿರುವೆನು. ಅಂದು ಕಣ್ತಪ್ಪಿಸಿದ ನನ್ನೆರೆಯಾ! ಇಂದು ನನಗೆ ಒಳಗೆ ಹೊರಗೆ, ಮೇಲೆ ಕೆಳಗೆ, ಎಲ್ಲೆಲ್ಲಿ ಅಂದರೆ ಅಲ್ಲಿಲ್ಲಾ ಅಣುವಿಗೂ ಅಣುವಾಗಿ ಮಹತ್ತಿಗೂ ಮಹತ್ತಾಗಿ ಎನಗೆ ಕಂಗೊಳಿಸಿದಿಯಲ್ಲಾ! ಧನ್ಯನಾದೆ! ಧನ್ಯನಾದೆ!! ಈ ನಿನ್ನ ಘನಕ್ಕೆ ಘನವಾದ ಮತ್ತು ಅಣುವಿಗೆ ಅಣು ವಾದ ಈ ನಿನ್ನ ರೂಪದರ್ಶನದಿಂದ ಧನ್ಯನಾದೆ. ಅಂದಿನ ಆ ಮಹಾ ಸಂತಾಪವು ಅಡಗಿಹೋಗಿ ಇಂದಿನ ಈ ಹಿಗ್ಗಿನ ಹಬ್ಬದುಬ್ಬಿನಲಿ ತೇಲುತಿಹೆನು. ಕೃತಕೃತ್ಯನು. ಧನ್ಯೋಽಹಂ ಧನ್ಯೋಽಹಂ" ಎಂದ ನ್ನುತ್ತಾ ತನ್ನ ಧನ್ಯತೆಯನ್ನು ಹೊಂದಿಕೊಳ್ಳುವುದರಲ್ಲಿಯೇ ಬಾಲಸೂ ರ್ಯನು ತನ್ನ ಕೋಮಲವಾದ ಕೈಗಳನು ಚಾಚಿ ರತ್ನದ ರಸದಿಂದ ಮುಗಿಲೆಲ್ಲವನೂಸಾರಿಸುವನು. ಅಚ್ಚ ಹಸರುಹುಲ್ಲಿನ ಮೇಲೆ ಮುತ್ತು ಗಳನುದುರಿಸುವನು. ಭೂತಾಯಿಯ ಉಡಿಯಲ್ಲಿ ತರತರದ ಹೂಗಳನು ಸುರಿಸುವನು. ಹಕ್ಕಿಗಳನೆಲ್ಲ ಎಬ್ಬಿಸಿ ಇಂಚರದಿ ಗಾನಗೆಯ್ಯುವನು.

ಒಡನೆಯೇ ಇತ್ತ ಆ ಕಿಶೋರನು ತನ್ನ ಕಣ್ಣು ಪಕಳಿಗಳನ್ನು ಅರಳಿಸಿ ನೋಡುತ್ತಾನೆ. ಇದ್ದ ಸೃಷ್ಟಿ ಇದಂತೆ ತೋರುತ್ತಿದ್ದರೂ ಅಂದು ಮಾತ ನಾಡದೆ ಹೋದ ಗಿಳಿವಿಂಡುಗಳು ಇಂದು ಮೆಲುನುಡಿಯಿಂದ ಮಾತ ನಾಡಿ ದೇವನ ಇರುವನ್ನು ಸಾರುತಿಹವು. ಅಂದು ಏನನೂ ಉಸು ರದ ಕೋಗಿಲೆಗಳು ಇಂದು ದೇವನ ಹಾಡುಗಳನು ಹಾಡಿ ಮನತಣಿ ಸುತಿಹವು. ಅಂದು ಹೀಗಳಿಸಿದ ಬಾಳೆ ಬನಗಳೆಲ್ಲ ಆ ಸಚ್ಚಿದಾನಂ ದನ ಪತಾಕೆಯನ್ನು ಹಾರಿಸುತ್ತಿಹವು. ಬಣ್ಣ ಬಣ್ಣದ ಹೂಗಳೆಲ್ಲ ಆ ದೇವನ ಇರವನ್ನು ಪ್ರಕಟಿಸುತ್ತಿಹವಲ್ಲವೆ ಮಣ್ಣು ಹುಡಿಯ ಪರ ಮಾಣುಗಳು ಕೂಡ "ದೇವನಿದ್ದಾನೆ! ಇಲ್ಲೇ ಇದ್ದಾನೆ!!" ಎಂದು ಸಾರಿ ಸಾರಿ ಹೇಳಿದವು.

"ಓಂ ಭಗವಾನ್! ಅಂದು ಏನನೂ ಕಾಣದ ಆಸೃಷ್ಟಿಯಲ್ಲಿಯೇ ಇಂದು ನಿನ್ನ ಅಪ್ರಮೇಯವಾದ ರೂಪನ್ನು ಕಂಡೆನಲ್ಲಾ! ಕಣ್ಣು ಬೇಕು. ಕಣ್ಣುಬೇಕು. ಈ ಕಣ್ಣುಗಳಲ್ಲ ಬಗೆಗಣ್ಣು ಬೇಕು. ಮನ ಬೇಕು ಮನಬೇಕು. ದೇವಮನಬೇಕು. ಅವು ನಿನ್ನ ಕರುಣದಿಂದ ಲಭಿಸಬೇಕು." ಎಂದನ್ನುತ್ತ "ಓಂ ಭಗವಾನ್! ಅನಂತಕೋಟಿ ಗೋಲಂಗಳೆಲ್ಲ ನಿನ್ನಂಗದಲ್ಲಿ ಅಣುಗಳಾಗಿ ವಿಹರಿಸುತ್ತಿಹವಲ್ಲ!! ನೀನು ಸಮಷ್ಟಿಗತ ದೇವ. ನಾನು ವ್ಯಷ್ಟಿಗತ ದೇವ. ನೀದೇವ. ನಾನು ದೇವಶಿಶು. ಓಂ ಓಂ ದೇವಾಯ ಜನ್ಮನೇ" ಎಂಬ ಮಂತ್ರ ವನ್ನುಸುರಿ ಎದ್ದು ನಿಲ್ಲುವನು. ಓಂ ಭಗವಾನ್ !

ಓಂ. ಓಂ. ಓಂ.

—❦—